


ವಿಸ್ತಾರವಾದ ಸಮುದ್ರದಲ್ಲಿ ಹರಡಿರುವ ಅನೇಕಾನೇಕ ದ್ವೀಪಗಳಲ್ಲಿ ಮರಾಳದ್ವೀಪವು ದೊಡ್ಡದಾಗಿದ್ದಿತು. ಅಲ್ಲಿಯ ರಾಜನಾದ ಮಂದರದೇವನು ಉತ್ತಮವಾದ ಪರಿಪಾಲನೆಯಿಂದ ಪ್ರಜೆಗಳಿಗೆ ಪ್ರಿಯನಾಗಿದ್ದನು.

ಒಂದು ದಿನ ಮಂದರದೇವರಾಜನು ಉದ್ಯಾನದಲ್ಲಿ ವಿಹರಿಸಿಕೊಂಡಿದ್ದನು. ನಿಶ್ಚಿಂತನಾದ ರಾಜನು ವಿರಾಮ ವೇಳೆಯಲ್ಲಿ ಹೀಗೆ ತಿರುಗಾಡುವ ಪದ್ಧತಿಯಿದ್ದಿತು. ಈಗ ಒಮ್ಮಿಂದೊಮ್ಮೆ ಅವನ ವಿಹಾರಕ್ಕೆ ವಿಘ್ನ ಬಂತು. ಯಾವ ಕಾರಣದಿಂದಲೋ ಕೋಟೆಯ ದ್ವಾರದ ಹೊರಬದಿಯಲ್ಲಿ ದೊಡ್ಡದಾಗಿ ಕಲಕಲರವ ಏಳ ತೊಡಗಿತು.

ಪ್ರಜೆಗಳ ಕೂಗಾಟವೂ ಸೈನಿಕರ ಎಚ್ಚರಿಕೆಗಳೂ ಆ ಪ್ರಾಂತದಲ್ಲೆಲ್ಲ ಮಾರ್ಮೊಳಗ ತೊಡಗಿದುವು. ಇಷ್ಟೊಂದು ಗಲಾಟೆಗೆ ಕಾರಣವೇನಿರಬಹುದೆಂದುಕೊಂಡು, ಆಶ್ಚರ್ಯಪಡುತ್ತ ವಿಹಾರವನ್ನು ಬಿಟ್ಟು ಕೋಟೆಯ ಕಡೆಗೆ ಹಿಂದಿರುಗ ತೊಡಗಿದನು ಮಂದರದೇವರಾಜ. ಅವನು ಅಲ್ಲಿಗೆ ಸಮೀಪಿಸುತ್ತಿರಲು, ಮಂತ್ರಿ ಬೇಗಬೇಗನೆ ಆ ಕಲಕಲರವ ಏಳಿಸುವ ಗುಂಪಿನ ಕಡೆಗೆ ಬಂದು ಶಾಂತರಾಗಿರುವಂತೆ ಜನರಿಗೆ ಎಚ್ಚರಿಕೆ ಹೇಳುವುದನ್ನು ಮಂದರದೇವನು ನೋಡಿದನು. ರಾಜನು ಅಲ್ಲಿಗೆ ಬರುತ್ತಿರುವ ಸಂಗತಿಯನ್ನು ಕೆಲವು ಸೈನಿಕರು ನೋಡಿ, ಆ ಸಂಗತಿಯನ್ನು ಮಂತ್ರಿಯೊಂದಿಗೆ ಹೇಳಿದರು. ಕೂಡಲೇ ಮಂತ್ರಿ ಹಿಂದಿರುಗಿ ನೋಡಿ ಬೇಗಬೇಗನೆ ರಾಜನ ಬಳಿಗೆ ಬಂದು ನಮಸ್ಕರಿಸಿ ತಲೆವಾಗಿ ನಿಂತನು.

" ಏನಾಯಿತು ? ಈ ಗಲಾಟೆಗೆ ಕಾರಣವೇನು ?" ಎಂದು ಮಂದರದೇವರಾಜನು ಮಂತ್ರಿಯನ್ನು ಕೇಳಿದನು.

ಮಂತ್ರಿ ಸ್ವಲ್ಪಹೊತ್ತು ಕೋಟೆಯ ಬಾಗಿಲ ಹತ್ತಿರವಿರುವ ಗುಂಪಿನ ಕಡೆಗೆ ತಿರುಗಿ, "ಪ್ರಭೂ ! ಇದರಲ್ಲಿ ಎಷ್ಟು ನಿಜವೋ ಎಷ್ಟುಸುಳ್ಳೋ ಸರಿಯಾಗಿ ತಿಳಿದಿಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ ಇದರಲ್ಲಿ




ಸ್ವಲ್ಪ ನಿಜವಿರಬೇಕೆಂದೂ ಭಾವಿಸುತ್ತೇನೆ. ಕುಂಡಲಿನೀ ದ್ವೀಪವು ಈ ಮಧ್ಯೆ ಅರಾಜಕ ಪರಿಸ್ಥಿತಿಯಲ್ಲಿದೆಯೆಂದು ನಮಗೆಲ್ಲ ಗೊತ್ತಿದೆಯಷ್ಟೆ ? ಈಗ ಬಂದ ಸಮಾಚಾರವೇನಂದರೆ, ಆ ದ್ವೀಪರಾಜ್ಯವನ್ನು ನರವಾಹನಮಿಶ್ರನೆಂಬ ಸೇನಾಧಿಪತಿ ವಶಪಡಿಸಿಕೊಂಡು ಈಗ ನಮ್ಮ ರಾಜ್ಯದ ಮೇಲೆ ದಾಳಿ ಹೊರಟಿದ್ದಾನಂತೆ, ಇದು ಸಮುದ್ರದಲ್ಲಿ ಮೀನು ಹಿಡಿಯಲು ಹೋದ ಬೆಸ್ತಜನರಿಂದ ತಿಳಿದು ಬಂದ ವಾರ್ತೆ. ಅಂತಲೇ ಇದು ಪ್ರಜೆಗಳಿಗೆಲ್ಲಾ ತಿಳಿದು, ಯುದ್ಧಸನ್ನಾಹವೆಲ್ಲಿದೆ ? ಸುಮ್ಮನಿದ್ದರೆ ಹೇಗೆ ? ಅಂತ ಕಲವರವೆಬ್ಬಿಸುತ್ತಿದ್ದಾರೆ. ಶಾಂತವಾಗಿರುವಂತೆ ಅವರಿಗೆ ಹೇಳುತ್ತಾ ಇದ್ದೆ. ನಿಜಸಂಗತಿಯನ್ನು ಬೇಗನೇ ತಿಳಿದು ಅರಿಕೆ ಮಾಡುತ್ತೇನೆ" ಎಂದನು.

ಮಂದರದೇವರಾಜನು ತಲೆಯಾಡಿಸಿ ಸುಮ್ಮನಿದ್ದನು. ಮಂತ್ರಿ ಅಂದುಕೊಳ್ಳುವ ಹಾಗೆ ಇದರಲ್ಲಿ ಸ್ವಲ್ಪ ನಿಜವಿರಲೂ ಬಹುದೆಂದು ರಾಜನೂ ಭಾವಿಸುವಂತೆ ಆ ಮೌನಮುದ್ರೆ ಹೇಳುತ್ತಿತ್ತು. ಕುಂಡಲಿನೀ ದ್ವೀಪವು ಈ ನಡುವೆ ಅರಾಜಕಸ್ಥಿತಿಯಲ್ಲಿದ್ದುದರಿಂದ ಅಲ್ಲಿ ನರವಾಹನ ಮಿಶ್ರನ ದ್ರೋಹ ನಡೆದುದು ನಿಜವೇ. ಅಂಥವನಿಗೆ ರಾಜ್ಯಕಾಂಕ್ಷೆ ಚುಚ್ಚುವುದೂ ಸಹಜವೇ. ತಮ್ಮ ರಾಜನಿಗೆ ಧೈರ್ಯ ಕೊಡುವ ಉದ್ದೇಶದಿಂದ ಮಂತ್ರಿ, "ಯಾವುದಕ್ಕೂ ಮುಂಜಾಗ್ರತೆಯಿಂದಿರಬೇಕೆಂದು ಸೇನಾಧಿಪತಿಗೆ ಸುದ್ದಿ ಕಳಿಸಿದ್ದೇನೆ, ನರವಾಹನ ಮಿಶ್ರನು ಧೂರ್ತನೆಂಬುದೇನೋ ನಿಜವೇ. ಆದರೆ ಈ ವಾರ್ತೆಯಲ್ಲಿರುವ ನಿಜಸಂಗತಿ ಸೂರ್ಯಾಸ್ತದೊಳಗೆ ನಮ್ಮ ಗೂಢಚಾರರ ಮೂಲಕ ತಿಳಿದುಬಿಡುತ್ತದೆ. ಇನ್ನೇನು, ಅವರೂ ಬರುವಹೊತ್ತೇ. ಅಂತಹ ಗಾಬರಿಯಾಗಲು ಕಾರಣವೇನಿಲ್ಲ" ಎಂದನು.

ಮಂದರದೇವನು ಮಂತ್ರಿಯ ಕಡೆಗೆ ಪ್ರಶ್ನಾರ್ಥಕವಾಗಿ ನೋಡಿ, "ಸರಿ. ಆ ವಾರ್ತೆಯೊಳಗಿನ ನಿಜಾನಿಜಗಳು ತಿಳಿದಕೂಡಲೇ ನನಗೆ ತಿಳಿಸಿರಿ. ನಿಮ್ಮನ್ನು ಕಾದುಕೊಂಡಿರುತ್ತೇನೆ" ಎಂದು ಹೇಳಿ ತನ್ನ ಭವನದ ಕಡೆಗೆ ಹೋದನು. ಮಂತ್ರಿ ಗಾಬರಿಗೊಂಡಿರುವನೆಂದೂ, ತನ್ನ ಸಮಾಧಾನಕ್ಕಾಗಿ ಏನೋ ಹೇಳಿದನೆಂದೂ ರಾಜನಿಗೆ ಗೊತ್ತಾಯಿತು.

ರಾಜನು ಹೋದಕೂಡಲೇ ಮಂತ್ರಿ ಸೀದಾ ಹೋಗಿ ಕೋಟೆಯ ಬುರುಜಿನ ಮೇಲೇರಿ ನೋಡತೊಡಗಿದನು. ದೂರದಲ್ಲಿ ಸಮುದ್ರವೂ, ಸಮುದ್ರದಲ್ಲಿ ತೇಲಾಡುವ ನಾವೆಗಳೂ ಕಾಣುತ್ತಿದ್ದುವು. ಮಂತ್ರಿ ಅಂದುಕೊಂಡ ಹಾಗೆಯೇ ದೂರದಲ್ಲಿ ತೆರೆಚಾಪೆ ಎತ್ತಲ್ಪಟ್ಟ ಒಂದು ನಾವೆ ಕಾಣುತ್ತಿತ್ತು. ಅದು ನೆಟ್ಟಗೆ ಮರಾಳದ್ವೀಪವನ್ನೇ ಗುರಿಯಿಟ್ಟು ಬರುತ್ತ, ಕ್ಷಣಕ್ಷಣಕ್ಕೂ ಸ್ಪಷ್ಟವಾಗಿಕಾಣುತ್ತಿತ್ತು. ಅದರೊಳಗೆ ಸೈನಿಕರೇ ತುಂಬಿ ಕುಳಿತಿದ್ದರು.

ಮಂತ್ರಿ ಮಾಡಿದ ಆಜ್ಞೆಯಂತೆ ಸೇನಾಧಿಪತಿ ಮುಂಜಾಗ್ರತೆಗಾಗಿ ಸೇನೆಗಳನ್ನು ವಿಭಾಗಿಸುತ್ತ,

ಬೇಗಬೇಗನೆ ಆಜ್ಞೆಗಳನ್ನು ಮಾಡುತ್ತಿದ್ದನು. ಸುತ್ತಲೂ ಸಮುದ್ರದಿಂದ ಆವರಿಸಲ್ಪಟ್ಟ ಮರಾಳದ್ವೀಪಕ್ಕೆ ಆಗಾಗ ಅಕ್ಕಪಕ್ಕಗಳ ದ್ವೀಪರಾಜ್ಯಗಳಿಂದ ಕಿರುಕುಳಗಳು ಬರುತ್ತಲೇ ಇದ್ದುದರಿಂದ, ಮರಾಳದ್ವೀಪದ ಪ್ರತಿ ಪುರುಷನೂ ಅಷ್ಟೋ ಇಷ್ಟೋ ಸೈನಿಕಶಿಕ್ಷಣ ಹೊಂದಿರಬೇಕೆಂದು ರಾಜಶಾಸನವಿದ್ದಿತು. ಅಂತೆಯೇ ಜನರೂ ಎಚ್ಚರಿಕೆಯಲ್ಲಿದ್ದರು. ಆದುದರಿಂದ ಪ್ರಜೆಗಳು ಶತ್ರು ಭಯವಿಲ್ಲದೆ ನೆಮ್ಮದಿಯಾಗಿದ್ದರು.

ಸೇನಾಧಿಪತಿ ಕೆಲವು ಸೈನಿಕರೊಂದಿಗೆ ಸಮುದ್ರ ತೀರಕ್ಕೆ ಹೊರಟನು. ಮರಾಳದ್ವೀಪದ ನಾವಿಕದಳದವರು ಆಗತ್ಯಬಿದ್ದರೆ ಶತ್ರು ನಾವೆಗಳೊಂದಿಗೆ ಯುದ್ಧಕ್ಕೆ ತಲೆಹಾಕಲು ಸಿದ್ಧರಾಗುತ್ತಿದ್ದರು. ಶಂಖನಾದಗಳ ಮೂಲಕವೂ ಪ್ರತಿನಾವಿಕನೂ ಸಮುದ್ರತೀರದಲ್ಲಿರುವ ತಮ್ಮತಮ್ಮ ನಾವೆಗಳನ್ನು ತಯಾರಾಗಿ ಬರುವಂತೆ ಆಜ್ಞಾಪಿಸುತ್ತಿದ್ದನು.

ಕೋಟೆಯ ಬುರುಜಿನ ಮೇಲಿದ್ದು ಈ ಸನ್ನಾಹಗಳನ್ನೆಲ್ಲ ನೋಡುತ್ತಿದ್ದ ಮಂತ್ರಿ, ಸೇನಾಧಿಪತಿಗಳ ಜಾಗರೂಕತೆಗೂ, ಕರ್ತವ್ಯಪ್ರಜ್ಞೆಗೂ, ಶ್ರದ್ಧೆಗೂ ಮೆಚ್ಚಿಕೊಳ್ಳುತ್ತಿರಲು, ಅಷ್ಟರಲ್ಲೇ ಏನೋ ವಿಪರೀತವಾಗುವುದೆಂಬ ಸೂಚನೆಯಂತೆ, ತಮ್ಮ ಗೂಢಚಾರರ ನಾವೆಯ ಹಿಂದೆ ಸ್ವಲ್ಪ ದೂರದಲ್ಲಿ ಹಠಾತ್ತಾಗಿ ಕಪ್ಪಗಿನ ಮೇಘವು ಕವಿಯುವಂತೆ ಕಂಡಿತು. ಅದು ತುಫಾನಿನ ಸೂಚನೆಯೇನೋ ಎಂದು ಪರಿಶೀಲಿಸುತ್ತಿರಲು; ಅದು ಮೇಘವಲ್ಲವೆಂದೂ, ಕೆಲವು ಯುದ್ಧನಾವೆಗಳು ಗುಂಪಾಗಿ ಮರಾಳದ್ವೀಪಕ್ಕೆ ಬರುತ್ತಿವೆಯೆಂದೂ ಗೊತ್ತಾಯಿತು. ಅವುಗಳ ಹಿಂದೆ ದೂರಾಕಾಶದಲ್ಲಿ ಮುದ್ದೆಮುದ್ದೆಯಾಗಿ ಕಪ್ಪಗಿನ ಮೇಘಗಳೂ ಇದ್ದವು. ಆ ಯುದ್ಧ ನಾವೆಗಳಿಂದ ಕಪ್ಪಗಿನ ಹೊಗೆ ಹೊರಡುತ್ತಿದ್ದಿತು. ವೇಗವಾಗಿ ಬರುತ್ತಿವೆ ಆ ನಾವೆಗಳು! ಸ್ವಲ್ಪ ಹೊತ್ತಿನಲ್ಲಿ ಎಣ್ಣೆಯ ಬಟ್ಟೆಯನ್ನು ಸುತ್ತಿದ ಬಾಣಗಳಿಗೆ ಬೆಂಕಿ ತಾಗಿಸಿ, ಮರಾಳದ್ವೀಪದವರ ನಾವೆಗೆ ಪ್ರಯೋಗಿಸುವುದೂ ಮಂತ್ರಿಗೆ ಕಂಡಿತು. ಹಿಂದು ಮುಂದು ಸೂಚನೆಯಿಲ್ಲದೆ ಯುದ್ಧವೇ ಶುರುವಾಗಿಬಿಟ್ಟಿತ್ತು!





ಇದೇನಾಶ್ಚರ್ಯ! ಎಂತಹ ಅನ್ಯಾಯ! ಬೆಸ್ತರಿಂದ ಬಂದ ವಾರ್ತೆ ನಿಜವೆಂದು ಈಗ ಮಂತ್ರಿಗೆ ಸ್ಪಷ್ಟವಾಯಿತು. ಯುದ್ಧದ ಸೂಚನೆ ಕೊಡದೆ, ಪ್ರಕಟನೆ ಮಾಡದೆ ಪರದೇಶಗಳ ಮೇಲೆ ದಾಳಿಮಾಡುವ ಹೊಸ ಸಂಪ್ರದಾಯವಿದು! ಕುಂಡಲಿನೀ ರಾಜ್ಯಾಧಿಕಾರವನ್ನು ಹಸ್ತಗತ ಮಾಡಿಕೊಂಡ ದುಷ್ಟನಾದ ನರವಾಹನ ಮಿಶ್ರನು ಈ ತಲೆ ತಿರುಕ ಸಂಪ್ರದಾಯವನ್ನು ಅಮಲಿಗೆ ತಂದಿದ್ದಾನೆ. ಮಂತ್ರಿಗೆ ಬಂದ ಕೋಪದಲ್ಲಿ ಮೈಯೆಲ್ಲಾ ಉರಿಯಿತು. ಸುಮಾರು ನೂರು ವರ್ಷಗಳ ಹಿಂದೆ ಶಾಕ್ತೇಯನೆಂಬ ಮಾಂತ್ರಿಕನು, ಹೀಗೆಯೇ ತನ್ನಿಚ್ಛೆಯಂತೆ ಯುದ್ಧ ಪ್ರಕಟನೆ ಏನೂ ಇಲ್ಲದೆಯೇ ಅನೇಕ ದ್ವೀಪರಾಜ್ಯಗಳನ್ನು ಕೊಳ್ಳೆ ಹೊಡೆದಿದ್ದನು. ಅವನು ರಾಜವಂಶದವನಲ್ಲವಾದುದರಿಂದ, ಮಾಂತ್ರಿಕನಾದುದರಿಂದ, ಮೃಗಕ್ಕೆ ಸಮಾನನೆಂದು ಅವನ ಅಧರ್ಮವನ್ನು ಪ್ರಜೆಗಳು ಸರಿಹೊಂದಿಸಿಕೊಂಡಿದ್ದರು. ಆದರೆ ನರವಾಹನ ಮಿಶ್ರನು ಒಬ್ಬ ರಾಜನ ಹತ್ತಿರ ಸೇನಾಧಿಪತಿಯಾಗಿ ದ್ರೋಹದಿಂದ ರಾಜ್ಯವನ್ನು ಅಪಹರಿಸಿದ್ದು ಮಾತ್ರವಲ್ಲದೆ, ಸುತ್ತುಮುತ್ತಿನ ರಾಜ್ಯಗಳಿಗೂ ಶನಿ ಹಿಡಿಸುತ್ತಾನೆಂದರೆ ಇದಕ್ಕಿಂತ ದುಷ್ಟತನ ಬೇರೇನಿದೆ?

ಮಂತ್ರಿ ಇಂತಹ ಆಲೋಚನೆಯಲ್ಲಿರುವಾಗ, ಮರಾಳದ್ವೀಪದ ನಾವಿಕಾ ಸೈನ್ಯವು, ತಮ್ಮ ನಾವೆಯ ಮೇಲೆಬರುವ ಅಪಾಯವನ್ನು ಗಮನಿಸಿ, ಮುಂದಕ್ಕೆ ಧಾವಿಸಿತು. ಸೈನಿಕರು ಉತ್ಸಾಹದಿಂದ ಸಿಂಹನಾದ ಮಾಡುತ್ತ ಶತ್ರುಗಳು ಮುಂದೆ ಬಾರದಂತೆ ಅಟಕಾಯಿಸತೊಡಗಿದರು. ಪ್ರಶಾಂತವಾಗಿದ್ದ ತಮ್ಮ ಸೇನೆಗಳೂ ಸೇನಾನಾಯಕರೂ ಒಮ್ಮೆಗೇ ಅಷ್ಟರ ಮಟ್ಟಿಗೆ ಸಿದ್ಧರಾದ ಜಾಣತನವನ್ನು ಮಂತ್ರಿ ಮೆಚ್ಚಿಕೊಂಡನು. ಅಂತೂ ಮರಾಳದ್ವೀಪದ ಹತ್ತಿರವೇ ಸಮುದ್ರದಲ್ಲಿ ಕುಂಡಲಿನೀ, ಮರಾಳದ್ವೀಪಗಳೊಳಗೆ ನಾವಿಕಾ ದಳಗಳ ಯುದ್ಧವು ಪ್ರಾರಂಭವಾಯಿತು.

ಹಲವಾರು ಸೈನಿಕರು ಕೋಟೆಯ ಬುರುಜುಗಳ ಮೇಲೆ ಬೇಗಬೇಗನೆ ಏರಿ ಬರತೊಡಗಿದರು. ಒಂದು ವೇಳೆ ಮರಾಳದ್ವೀಪದ ಪ್ರಜೆಗಳು ಸೋತು ಹೋಗಿಬಿಟ್ಟರೆ, ಪಟ್ಟಣವನ್ನು ರಕ್ಷಿಸಲು, ಆ ಸೈನಿಕರು ಕಳುಹಿಸಲ್ಪಟ್ಟಿದ್ದರು. ಮಂತ್ರಿ ಆ ಸೈನಿಕರಲ್ಲಿ ಒಬ್ಬನನ್ನು ಕರೆದು, ಯುದ್ಧವಾರ್ತೆಯನ್ನು ರಾಜನೊಂದಿಗೆ ಹೀಗೆ ಹೀಗೆ ಹೇಳುವಂತೆ ಹೇಳಿ ಕಳುಹಿಸಿದನು. ಅದನ್ನು ಶಿರಸಾವಹಿಸಿಕೊಂಡು ಅವನು ಅವಸರದಿಂದ ಓಡಿದನು.

ನೋಡನೋಡುತ್ತಿದ್ದಂತೆ ಸಮುದ್ರದಲ್ಲಿ ನಾವಿಕಾ ಯುದ್ಧವು ಬಲು ಜೋರಾಗಿ ನಡೆಯುತ್ತಿದ್ದಿತು. ಎರಡು ಪಕ್ಷಗಳವರೂ ಪ್ರಾಣವನ್ನು ಪಣಕ್ಕಿಟ್ಟು ಹೋರಾಡ ತೊಡಗಿದರು. ಎಣ್ಣೆಯ ಬಟ್ಟೆಯಿಂದ ಉರಿಯುವ ಬಾಣಗಳು ಒಂದು ಕಡೆಯಿಂದ ಇನ್ನೊಂದು ಕಡೆಗೆ ಎಡೆಬಿಡದೆ ಹಾರಾಡುತ್ತ,



ಆಕಾಶದಲ್ಲಿ ಅಗ್ನಿ ನಾಟ್ಯವಾಗಿ ತೋರಿತು. ನಾವೆಗಳೂ ಉರಿಯ ತೊಡಗಿ, ನಾವಿಕರೂ ಸಮುದ್ರದಲ್ಲಿ ಹಾರುತ್ತಿದ್ದರು. ಉರಿಯುವ ನಾವೆಗಳ ಬೆಂಕಿಯನ್ನು ಆರಿಸಿ ಅವುಗಳನ್ನು ವಶಪಡಿಸಿಕೊಳ್ಳಲು ಎರಡು ಪಕ್ಷಗಳವರೂ ಪ್ರಯತ್ನಿಸುತ್ತಿದ್ದರು. ಆ ನಾವೆಗಳಿಗೆ ಧುಮುಕುವುದೂ ಹತ್ತುವುದೂ ಬೀಳುವುದೂ ನಡೆದೇ ಇದ್ದಿತು. ಸಮುದ್ರಕ್ಕೆ ಬಿದ್ದವರೆಷ್ಟೋ! ಕತ್ತಿಗಳಿಗೆ ಬಲಿಯಾದವರೆಷ್ಟೋ! ಆ ಸಮಯದಲ್ಲಿ ಮೇಘಗಳು ಮೇಲೆ ಮೇಲೆ ಬರುತ್ತ, ಮಿಂಚುಗಳೂ ಗುಡುಗೂ ತೊಡಗಿದುವು.

ಕೋಟೆಯ ಬುರುಜಿನ ಮೇಲಿನಿಂದ ಇದನ್ನೆಲ್ಲಾ ನೋಡುತ್ತಿದ್ದ ಮಂತ್ರಿಗೆ ಈಗ ನಡೆಯುವ ನಾವಿಕಾ ಯುದ್ಧದ ಪರ್ಯವಸಾನವು ತಮ್ಮ ರಾಜ್ಯಕ್ಕೆ ಅನುಕೂಲವಾಗುವುದೆಂಬ ನಂಬುಗೆ ಸಣ್ಣದಾಗುತ್ತಾ ಹೋಯಿತು. ಅವನಿಗಿದ್ದ ಒಂದೇ ಒಂದು ಆಶೆ, ತಾನು ಕಳುಹಿಸಿದ ಗೂಢಚಾರರ ನಾವೆ ಸುರಕ್ಷಿತವಾಗಿ ತೀರಕ್ಕೆ ಬರಬೇಕೆಂಬುದೇ. ಆಗ ಕುಂಡಲಿನೀ ರಾಜ್ಯದಲ್ಲಿ ನಡೆದ ಬದಲಾವಣೆಗಳೂ, ನರವಾಹನ ಮಿತ್ರನ ಶಕ್ತಿಸಂಗತಿಗಳೂ, ಅಲ್ಲಿಯ ಪ್ರಜೆಗಳ ಮನಸ್ಥಿತಿಯೂ ಅರ್ಥವಾಗುತ್ತದೆ. ಆ ನಾವೆ ಸುರಕ್ಷಿತವಾಗಿ ಬರುತ್ತದೋ ಇಲ್ಲವೋ ಎಂಬುದೇ ಈಗ ಸಂದೇಹ!

ಅಷ್ಟರಲ್ಲಿ ಮಂತ್ರಿಯು ಹಿಂದಿನಿಂದ ಪಾದಗಳ ಸಪ್ಪಳ ಕೇಳಿಸಿತು. ಅವನು ತಲೆ ತಿರುಗಿಸಿ ನೋಡಿದಾಗ, ರಾಜನಿಗೆ ಯುದ್ಧದ ಸಮಾಚಾರ ಹೇಳಲು ಹೋದ ಸೈನಿಕನು ತೇಕುತ್ತ ಓಡೋಡಿ ಬಂದು ಗಾಬರಿಯ ಕಳೆಯಲ್ಲಿ ನಿಂತನು.

"ಏನಾಯಿತು? ಏಕೆ ಹೀಗೆ ಓಡುತ್ತಾ ಬಂದೆ?" ಎಂದು ಮಂತ್ರಿ ಆತುರದಿಂದ ಕೇಳಿದನು.

"ಮಹಾರಾಜರು ಎಲ್ಲಿಯೂ ಕಾಣುವುದಿಲ್ಲ ಪ್ರಭೂ!" ಎಂದು ಸೈನಿಕನು ಉಬ್ಬಸಬಿಡುತ್ತ ಹೇಳಿದನು.

"ಆ ಸಂಗತಿ ನಿನಗೆ ಹೇಗೆ ಗೊತ್ತಾಯಿತು? ಸ್ವಲ್ಪ ಮೊದಲು ಅವರು ಭವನದ ಕಡೆಗೆ ಹೋದರಲ್ಲ?" ಎಂದನು ಮಂತ್ರಿ.

"ಅಯ್ಯಾ, ನಾನು ಹೋಗುವಾಗಲೇ ರಾಜರ ಭವನದೊಳಗೆ ಅಲ್ಲಕಲ್ಲೋಲವಾಗುತ್ತಿದ್ದಿತು. ಕೆಲವು ನಿಮಿಷಗಳ ಕೆಳಗೆ ಮಹಾರಾಜರು, ದ್ರೋಹ ದ್ರೋಹ, ಸಹಾಯ, ಸಹಾಯ ಎಂದು ಕೂಗುವುದನ್ನು ಒಬ್ಬಿಬ್ಬರು ದಾಸಿಯರು ಕೇಳಿದರಂತೆ. ಭಟರು ಅವರನ್ನು ಅರಮನೆಯೊಳಗೆಲ್ಲಾ ಹುಡುಕುತ್ತಿದ್ದಾರೆ. ಎಲ್ಲಿಯೂ ಮಹಾರಾಜರ ಸದ್ದು ಕೇಳಲಿಲ್ಲ. ಅವರೊಂದಿಗೆ ಅವರ ಇಬ್ಬರು ಅಂಗರಕ್ಷಕರು ಕೂಡಾ ಕಾಣುವುದಿಲ್ಲ. ಏನೋ ಆಗಬಾರದುದೇ ಆಗಿರಬೇಕು ಪ್ರಭೂ!" ಎಂದನು ಸೈನಿಕ.

ಅಂಗರಕ್ಷಕರೂ ಕಾಣುವುದಿಲ್ಲವೆಂದು ಕೇಳಿದ ಕೂಡಲೇ ಮಂತ್ರಿಗೆ ನಡೆದ ದ್ರೋಹವು ಏನೆಂಬು



ವನ್ನು ಊಹಿಸಿಕೊಳ್ಳುವಂತಾಯಿತು. ಬಹುಶಃ ಇದು ಕುಂಡಲಿನೀ ದ್ವೀಪವನ್ನು ವಶಪಡಿಸಿಕೊಂಡ ನರವಾಹನ ಮಿತ್ರನ ಹೊಸ ರಾಜನೀತಿಯ ಪ್ರಭಾವವೆಂದು ಹೊಳೆಯಿತು. ರಾಜನು ಭವನದೊಳಗೆಲ್ಲಿಯೂ ಇಲ್ಲವೆಂದು ಭಟರೆಲ್ಲಾ ಹುಡುಕಿ ಹೇಳುವುದನ್ನು ನೋಡಿದರೆ, ಅವರನ್ನು ಬಂಧಿಸಿ ಒಯ್ಯುವರು ಇಷ್ಟು ಹೊತ್ತಿಗೆ ಕೋಟೆ ಗೋಡೆಯಾಚೆಗೆ ತೆಗೆದುಕೊಂಡು ಹೋಗಿರಬಹುದೆಂದು ಮಂತ್ರಿಗೆ ಅನುಮಾನವೆದ್ದಿತು. ತಮ್ಮ ರಾಜನ ಅಂಗರಕ್ಷಕರು ಮಹಾದ್ರೋಹಿಗಳೇ ನಿಜ!

ಇಂತಹ ಅನುಮಾನವೆದ್ದುದೇ ತಡ, ಮಂತ್ರಿ ಅವಸರವಸರವಾಗಿ ಕೆಲ ಮಂದಿ ಸೈನಿಕರನ್ನು ಕರೆದುಕೊಂಡು ಕೋಟೆಯ ಮೇಲಿನ ಬುರುಜಿನಿಂದ ಇನ್ನೊಂದು ಬುರುಜಿನ ಕಡೆಗೂ, ಅಲ್ಲಿಂದ ಮತ್ತೊಂದು ಬುರುಜಿಗೂ ಓಡುತ್ತ ಹೊರಗೆ ಕಾಣುವ ಅಗಳತೆಯನ್ನು ನೋಡುತ್ತ ಹೋಗಲು, ಒಂದು ಕಡೆ ಕೋಟೆಯ ಗೋಡೆಯಿಂದ ನೇತಾಡುತ್ತಿರುವ ಹಗ್ಗವೂ, ಅದನ್ನು ಹಿಡಿದುಕೊಂಡು ಕೆಳಕ್ಕೆ ಇಳಿಯುತ್ತಿದ್ದ ಮೂವರು ಮನುಷ್ಯರೂ ಅವನ ಕಣ್ಣಿಗೆ ಬಿದ್ದರು.

ಮಂತ್ರಿ ಅವರನ್ನು ಸೈನಿಕರಿಗೆ ತೋರಿಸುತ್ತ, "ಅದಿಗೋ ಮಹಾರಾಜರು! ಅವರ ಅಂಗರಕ್ಷಕರಿಬ್ಬರು!" ಎನ್ನಲು ಸೈನಿಕರು "ಹೌದು ಹೌದು! ಅವರೇ! ಅವರೇ! ಮಹಾದ್ರೋಹ! ಮಹಾದ್ರೋಹ!" ಎಂದು ಕೂಗಿದರು.

ಈಗೇನು ಮಾಡುವುದೆಂದು ಮಂತ್ರಿ ಇಕ್ಕಟ್ಟಿಗೆ ಬಿದ್ದನು. ಕೋಟೆ ಗೋಡೆಯ ಆನೆಗೆ ಕಟ್ಟಲ್ಪಟ್ಟ ಹಗ್ಗವನ್ನು ಕಡಿದರೆ, ರಾಜನೂ ಅವನನ್ನು ನಿರ್ಬಂಧಿಸಿಕೊಂಡು ಹೋಗುವ ಅಂಗರಕ್ಷಕರೂ ಅಗಾಧವಾದ ಅಗಳತೆಯೊಳಗೆ ಬಿದ್ದು ಹೋಗುವರು. ಹಾಗಿಲ್ಲದೆ ನೋಡುತ್ತಾ ಸುಮ್ಮನಿದ್ದರೆ ಅವರು ರಾಜನನ್ನು ಬಲವಂತದಿಂದ ಬಂಧಿಸಿ, ನಿರಾತಂಕವಾಗಿ ಶತ್ರುರಾಜ್ಯಕ್ಕೆ ಕರೆದುಕೊಂಡು ಹೋಗುತ್ತಾರೆ. ಸಮೀಪದಲ್ಲಿ ಶತ್ರುಗಳ ಕಡೆಯವರು ಅಡಗಿ ನಿರೀಕ್ಷಿಸುತ್ತಿರಲೂ ಸಾಕು.

ಮಂತ್ರಿ ಇಂತಹ ಸಂಶಯಗಳಲ್ಲಿ ಮುಳುಗೇಳುತ್ತಿರುವಾಗ, ಒಬ್ಬ ಸೈನಿಕನು, "ಅಯ್ಯೋ, ಅಲ್ಲಿ ನೋಡಿರಿ! ಅಗಳತೆಯ ಆಚೆಯ ಬದಿಯಲ್ಲಿ ಮೂರು ಕುದುರೆಗಳು ಸಿದ್ಧವಾಗಿ ನಿಂತಿವೆ." ಎಂದು ಕೂಗಿ ಹೇಳಿದನು.

ಮಂತ್ರಿಯೂ ಆ ಕುದುರೆಗಳನ್ನು ನೋಡಿದನು. ಜೀನು ಹಾಕಿ ಸಿದ್ಧವಾಗಿ ನಿಂತಿದ್ದ ಕುದುರೆಗಳು. ಸಮಯ ನೋಡಿ ರಾಜನನ್ನು ಬಂಧಿಸಿ ತರಲು ನರವಾಹನ ಮಿತ್ರನು ರಾಜಭವನದೊಳಗೆ ತನ್ನ ಬಂಟರನ್ನು ಪ್ರವೇಶಗೊಳಿಸಿದ್ದಾನೆ. ಇದನ್ನು ಅರ್ಥಮಾಡಿಕೊಂಡು ಮಂತ್ರಿ ಸಮುದ್ರದ ಕಡೆಗೆ ದೃಷ್ಟಿ ಹಾಯಿಸಿದನು, ತಮ್ಮ ಗೂಢಚಾರರ ನಾವೆ ತೀರವನ್ನು

ಸಮೀಪಿಸುತ್ತಾ, ಇದೆ. ಪರಿಸ್ಥಿತಿ ವಿಷಮವಾದುದನ್ನು ನೋಡಿದ ಮಂತ್ರಿ ಸೈನಿಕರ ಕಡೆಗೆ ತಿರುಗಿ, "ನಿಮ್ಮಲ್ಲಿ ನಾಲ್ಕೈದು ಮಂದಿ ಕುದುರೆಗಳನ್ನೇರಿ ಮಹಾರಾಜರ ರಕ್ಷಣೆಗೆ ಧಾವಿಸಿರಿ. ಈ ದುರ್ಘಟನೆ ಕುರಿತು ಕೋಟೆಯ ಹೊರಗೆ ಕೂಡಿದ ಜನರಾರಿಗೂ ಏನೂ ಹೇಳಬೇಡಿ. ಬೇಗ ಓಡಿರಿ !" ಎಂದು ಆಜ್ಞೆ ಮಾಡಿದನು.

ಸೈನಿಕರು ಕೋಟೆಯ ಬುರುಜಿನ ಮೇಲಿನಿಂದ ಕೆಳಕ್ಕೆ ಓಡಿದರು. ಮಂತ್ರಿ ಕೆಳಗಿರುವ ಅಗಳತೆಯ ಕಡೆಗೆ ನೋಡಿದನು. ಅಷ್ಟು ಹೊತ್ತಿಗೆ ರಾಜನನ್ನು ದ್ರೋಹಿಗಳಾದ ಅಂಗರಕ್ಷಕರಿಬ್ಬರೂ ಅಗಳತೆಯನ್ನು ದಾಟಿಸಿ, ಕುದುರೆಗಳಿರುವ ಕಡೆಗೆ. ನಡೆಯಿಸಿಕೊಂಡು ಹೋಗುತ್ತಿದ್ದರು. ರಾಜನು ಮುಂದೆ ನಡೆಯುತ್ತಿರಲು, ದ್ರೋಹಿಗಳಿಬ್ಬರೂ ಕತ್ತಿಗಳನ್ನು ಹಿಡಿದುಕೊಂಡು ಅವನ ಹಿಂದೆ ಹೋಗುತ್ತಿದ್ದರು. ಸ್ವಲ್ಪ ಹೊತ್ತಿಗೆ ಅವರು ರಾಜನನ್ನು ಒಂದು ಕುದುರೆಯ ಮೇಲೆ ಬಲವಂತವಾಗಿ ಏರಿಸಿದರು. ಅದು ಮುಂದೆ ಕದಲಿದ ಕೂಡಲೇ ಅದರ ಹಿಂದೆಯೇ ತಾವು ಕೂಡಾ ಕುದುರೆಗಳನ್ನು ಏರಿಕೊಂಡು ಓಡಿಸಿಕೊಂಡು ಹೋಗ ತೊಡಗಿದರು. ಹಾಗೆ ಅವರು ರಾಜನನ್ನು ಸಮುದ್ರದತೀರಕ್ಕೆ ಸಾಗಿಸಿಕೊಂಡು ಹೋಗುತ್ತಿದ್ದಾರೆಂದು ಮಂತ್ರಿಗೆ ಗೊತ್ತಾಯಿತು. ಇತ್ತ ರಾಜನ ರಕ್ಷಣೆಗಾಗಿ ಹೊರಟ ನಾಲ್ವರು ಸೈನಿಕರು. ಕುದುರೆಗಳನ್ನೇರಿ, ಬಹು ವೇಗದಿಂದ ಕೋಟೆಯ ದ್ವಾರದ ಮೂಲಕ ಜನರ ಗುಂಪನ್ನು ಸೀಳಿಕೊಂಡು ಹೊರಬಿದ್ದು, ರಾಜನನ್ನು ಬಂಧಿಸಿ ಒಯ್ಯುವವರ ಬೆಂಬತ್ತಿ ಓಡಿದರು. ಗೊರಸುಗಳ ಸಪ್ಪಳ ಕೇಳಿ ಹಿಂದಿರುಗಿ ನೋಡಿದ ದ್ರೋಹಿಗಳಿಬ್ಬರೂ, ತಮ್ಮನ್ನು ರಾಜನ ಸೈನಿಕರು ಬೆಂಬತ್ತುವುದನ್ನು ನೋಡಿ, ರಾಜನ ಬೆನ್ನಿಗೆ ತಮ್ಮ ಕತ್ತಿಗಳನ್ನು ತಾಗಿಸಿ, ವೇಗವಾಗಿ ಕುದುರೆಯನ್ನು ಓಡಿಸುವಂತೆ ಜೋರು ಮಾಡಿದರು.

ಕೋಟೆಯ ಬುರುಜಿನಮೇಲಿದ್ದು, ಇದನ್ನೆಲ್ಲಾ ಗಮನಿಸಿಕೊಂಡಿದ್ದ ಮಂತ್ರಿ, ಒಂದು ಸಾರಿ ಬಂಧಿತನಾದ ತಮ್ಮ ರಾಜನ ಕಡೆಗೂ, ಮತ್ತೊಂದು ಸಾರಿ ತೀರವನ್ನು ಸಮೀಪಿಸುತ್ತಿರುವ ಶತ್ರು ನಾವೆಗಳ ಕಡೆಗೂ ನೋಡುತ್ತ, "ದೇವೀ ! ಮರಾಳದ್ವೀಪೇಶ್ವರೀ ! ನಿನ್ನ ಭಕ್ತರನ್ನು ಹೀಗೂ ಕಠಿಣ ಪರೀಕ್ಷೆಗೆ ಗುರಿ ಪಡಿಸುವೆಯಾ ? ದಯೆದೋರಲಾರೆಯಾ ?" ಎಂದು ಎದೆಯ ಮೇಲೆ ಕೈಗಳನ್ನಿಟ್ಟು ಕೊಂಡು ಆಕಾಶದ ಕಡೆಗೆ ತಲೆ ಯೆತ್ತಿದನು.

ಮರುಕ್ಷಣದಲ್ಲೇ ಪ್ರಳಯ ಭಯಂಕರವಾದೊಂದು ಲಟಲಟಾಟ್ಲೆಂಟ ಸಿಡಿಲು ಶಬ್ದಮಾಲೆ ಪ್ರಾರಂಭವಾಯಿತು. ಮರಾಳದ್ವೀಪವೇ ಗಡಗಡಿಸಿತು. ಮಂತ್ರಿ ಬೆರಗಿನಿಂದ ನಿಶ್ಚೇಷ್ಟನಂತಾದನು. (ಇನ್ನೂ ಇದೆ)



# ಮಕರದೇವತೆ



## ೨

[ಶಾಂತಿ ಸಂಪದಗಳಿಂದ ಮೆರೆಯುವ ಮರಾಳ ದ್ವೀಪಕ್ಕೆ ಮಂದರದೇವನು ರಾಜನಾಗಿದ್ದನು. ನೆರೆಯಲ್ಲಿದ್ದ ಕುಂಡಲಿನೀ ದ್ವೀಪದಲ್ಲಿ ಅರಾಜಕವು ಪ್ರಾರಂಭವಾಗಿತ್ತು. ನರವಾಹನ ಮಿತ್ರಸೇನ ಸೇನಾನಿ ಅಲ್ಲಿಯ ಅಧಿಕಾರವನ್ನು ವಶಪಡಿಸಿಕೊಂಡು ಮರಾಳ ದ್ವೀಪವನ್ನೂ ಆಕ್ರಮಿಸಿದನು. ಅವನ ಗೂಢಚಾರರ ಕೈಗೆ ಮಂದರದೇವನು ಬಂದಿಯಾಗಿ ಸಿಕ್ಕಿಬಿದ್ದನು.]

ಶತ್ರು ಸೈನಿಕರು ಮಂದರದೇವನನ್ನು ಎಳೆದುಕೊಂಡು ಹೋಗುತ್ತಿದ್ದಾಗ, ಗುಡುಗು ಸಿಡಿಲುಗಳೊಂದಿಗೆ, ಜಡಿಮಳೆಯೇ ಪ್ರಾರಂಭವಾಯಿತು. ಸಮುದ್ರ ತೀರದಲ್ಲಿದ್ದ ಉದ್ದುದ್ದವಾದ ತೆಂಗಿನ ಮರಗಳೂ, ಚಿಟುಕಿನ ಮರಗಳೂ ಬಿರುಗಾಳಿಗೆ ಓಲಾಡ ತೊಡಗಿದುವು. ಅವುಗಳ ಸೊಯಿಂ ಸೊಯಿಂ ಶಬ್ದವು ಕಿವಿಗಳನ್ನು ಸೀಳುವಂತಿದ್ದುವು. ಗಾಳಿಯ ರಭಸಕ್ಕೆ ಅಲ್ಲಲ್ಲಿ ಮರಗಳು ಬೇರು ಸಹಿತ ಮಗುಚಿ ಬೀಳುತ್ತಿದ್ದುವು. ಇಂತಹ ಪ್ರಕೃತಿ ವಿರೋಧವನ್ನೂ ಭೇದಿಸಿಕೊಂಡು ಶತ್ರು ಭಟರು ಮಂದರದೇವನನ್ನು ಸಾಗಿಸಿಕೊಂಡು ಹೋಗುತ್ತಿದ್ದರು. ಆ ಸಮಯದಲ್ಲಿ ದೇವದಾಸೆ ಬಿಟ್ಟು ಸಮುದ್ರದಲ್ಲಿ ಯುದ್ಧಮಾಡುತ್ತಿದ್ದ ಮರಾಳ ಹಾಗು ಕುಂಡಲಿನೀ ದ್ವೀಪರಾಜ್ಯಗಳ ಸೈನಿಕರು ಶತ್ರು, ಮಿತ್ರರನ್ನು ತಿಳಿಯದೆ ಚೆಲ್ಲಾಟಿದರಾಗಿ ಹೊಡೆದಾಡುತ್ತಿದ್ದರು. ಹಾಗಿದ್ದರೂ ಕುಂಡಲಿನೀ ಸೈನಿಕರು ಮರಾಳದ ತೀರದಲ್ಲಿಳಿದು ಅಲ್ಲಿರುವ ಮರಾಳ ಸೈನಿಕರೊಂದಿಗೆ ಬಾಹಾಬಾಹೀ ಯುದ್ಧಕ್ಕೆ ತೊಡಗಿದರು. ಪ್ರಕೃತಿಯ ಆರ್ಭಟೆಯನ್ನು ಮೀರಿಸಿಯೇ ಅವರ ಯುದ್ಧದ ಆರ್ಭಟೆ ಕೇಳುತ್ತಿದ್ದಿತು.



ಬಂದಿಯಾಗಿ ಕುದುರೆಯ ಮೇಲೆ ಅತಿ ವೇಗದಲ್ಲಿ ಸಾಗಿಸಲ್ಪಡುವ ಮಂದರ ದೇವನ ಕಿವಿಗಳಿಗೆ ಕುಂಡಲಿನೀ, ಮರಾಳ ಸೈನಿಕರು ಮಾಡುವ ಯುದ್ಧಧ್ವಾನಗಳು ಕೇಳಿಸುತ್ತಲೇ ಇದ್ದರೂ, ಯಾರಿಗೆ ಜಯವಾಗುವುದೆಂಬುದನ್ನು ಕಂಡು ಹಿಡಿಯಲಾಗಲಿಲ್ಲ.

"ಜೈ ಕುಂಡಲಿನೀ!" ಎಂದು ಗರ್ಜಿಸಿಕೊಂಡು ಮುಂದೆ ಮುಂದೆ ನುಗ್ಗಿ ಬರುವ ಮರಾಳ ಸೈನಿಕರನ್ನು "ಜೈ ಮರಾಳೀ!" ಎಂದು ಅಷ್ಟೇ ಜೋರಿನಿಂದ ಕಿವಿಗಳನ್ನು ತೂತುಮಾಡುವಂತೆ ಗರ್ಜಿಸುತ್ತ ಮರಾಳಸೈನಿಕರು ಪ್ರತಿಭಟಿಸುತ್ತಿದ್ದರು. ಆಕಾಶದ ಕಾರ್ಮೋಡಗಳು ಗಾಳಿಯ ವೇಗಕ್ಕೆ ಚೆಲ್ಲಾಚೆದರಾಗುತ್ತಿರಲು ಸಿಡಿಲಿನ ಕಠೋರ ಶಬ್ದವು ಆಗಾಗ ಭೂಮಿಯನ್ನು ನಡುಗಿಸುತ್ತಿದ್ದಿತು. ಒಂದೇ ಸಮನೆ ಜೋರಾಗಿ ಸುರಿಯುವ ಮಳೆ, ಆಗಾಗ ಕಡಮೆಯಾಗಿ ಮತ್ತೆ ಜೋರಾಗುವ ಕ್ರಮಕ್ಕೆ ತಿರುಗಿತ್ತು. ಗಾಳಿಯೂ ಹಾಗೆಯೇ.

"ಹಾ! ಮರಾಳದೇವೀ! ನನ್ನ ರಾಜ್ಯಕ್ಕೂ ನನಗೂ ಇಂದಿಗೆ ಸಂಬಂಧ ತೀರಿಸಿದೆಯಲ್ಲಾ!" ಎಂದು ಮಂದರ ದೇವನು ತನ್ನೊಳಗೇ ಪ್ರಲಾಪಿಸಿ ಕೊಂಡನು. ಇನ್ನು ಅವನಿಗೆ ತಪ್ಪಿಸಿಕೊಂಡು ಹೋಗುವ ಮಾರ್ಗವೇ ಇಲ್ಲ. ತನಗೆ ಇದಿರಾತಿರಾಗಿ ದ್ರೋಹಿಗಳಾಗಿ ಹಿಡಿಸಿಕೊಟ್ಟ ತನ್ನ ಅಂಗರಕ್ಷಕರೊಂದಿಗೆ ಹೋರಾಡಬೇಕಾದರೂ ಅವನಲ್ಲಿ ಯಾವ ಆಯುಧವೂ ಇಲ್ಲದಂತಾಗಿದೆ. ಇಂತಹ ಆಪತ್ತಿನಿಂದ ಇನ್ನು ಪಾರಾಗುವುದು ಸುಳ್ಳೆಂದು ಅವನು ನಿರಾಶನಾಗಿದ್ದಾಗ, ಸಮೀಪದಲ್ಲಿಯೇ ಕೇಳಿಸಿದ "ಜೈ ಮರಾಳೀ!" ಎಂಬ ಸಿಂಹನಾದವು ಅವನಿಗೆ ಆಶ್ಚರ್ಯವನ್ನುಂಟು ಮಾಡಿತು. ಅದು ಹೊಸತಾಗಿ ಬಂದವರಿಂದ ಹೊರಟ ಶಬ್ದ.

ಹಾಗೆ ಸಿಂಹನಾದಮಾಡಿದವರು, ಕೋಟೆಯೊಳಗಿನಿಂದ ಮಂತ್ರಿ ಕಳುಹಿಸಿದ ಪ್ರತ್ಯೇಕ ವೀರರಾಗಿದ್ದರು. ಅವರು ಮಂದರದೇವನ ರಕ್ಷಣೆಗಾಗಿಯೇ ಬರುತ್ತಿದ್ದರು. ಕುದುರೆಗಳನ್ನು ಅತಿವೇಗವಾಗಿ ಓಡಿಸಿಕೊಂಡು ಕ್ಷಣೇ ಕ್ಷಣೇ ಸಮೀಪಿಸಿಕೊಂಡಿದ್ದರು. ತನಗೆ ಸಾಧಕವಾದ ಆ ನಿನಾದವನ್ನು ಕೇಳಿ ಮಂದರದೇವನು ಹಿಂದಿರುಗಿ ನೋಡಿದನು. ಅದೇಕ್ಷಣದಲ್ಲಿ ಕಣ್ಣು ಕೋರೈಸಿ ಕತ್ತಲೆಕವಿಸುವ ಕಾಂತಿಯಿಂದ, ಲಟಲಟನೆ ಕಿವಿಗಳು ಒಡೆಯುವಂತೆ ಬರಸಿಡಿಲೊಂದು ಭಯಂಕರ ಧ್ವನಿಯಿಂದ ಹೊಡೆಯಿತು. ಆ ಕಾಂತಿಗೆ ಮಂದರ ದೇವನು ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿ ಕುಲದೇವಿಯನ್ನು ಸ್ಮರಿಸಿದನು.

ಮಂದರದೇವನು ಕಣ್ಣು ತೆರೆಯುವಷ್ಟರಲ್ಲಿ ದ್ರೋಹಿಗಳಾದ ಇಬ್ಬರು ಅಂಗರಕ್ಷರೂ ನೆಲದಲ್ಲಿ ಬಿದ್ದು ನರಳುತ್ತಿದ್ದರು. ಅವರು ಕುಳಿತುಕೊಂಡಿದ್ದ ಕುದುರೆಗಳಲ್ಲಿ ಒಂದು ಮರಣ ಯಾತನೆಯಿಂದ ಚಡಪಡಿಸುತ್ತಿದ್ದಿತು. ಎರಡನೆಯ ಕುದುರೆ ಹುಚ್ಚು ಹಿಡಿದಂತೆ ಸವಾರನನ್ನು ಕೆಡವಿ ಓಡುತ್ತಿದ್ದಿತು.

ಬರಸಿಡಿಲು ಅವರ ಮೇಲೆಯೇ ಒಡೆಯಿತೆಂದು ಮಂದರದೇವನು ತಿಳಿದು ಸ್ತಂಭೀಭೂತನಾದನು.

ಮಂದರದೇವನು ತಟಕ್ಕನೆ ಕುದುರೆಯಿಂದ ಕೆಳಗೆ ಹಾರಿದನು. ಅದೇ ಸಮಯದಲ್ಲಿ ಅವನ ರಕ್ಷಣೆಗಾಗಿ ಧಾವಿಸಿಬರುವ ನಾಲ್ವರೂ ತೀರ ಹತ್ತಿರಕ್ಕೆ ಬಂದರು. ಅವರೊಂದಿಗೆ ಮಂದರದೇವನು ಸಿಡಿಲು ನೇಟಿಗೆ ಬಿದ್ದ ಆ ದ್ರೋಹಿ ಅಂಗರಕ್ಷಕರ ಬಳಿಗೆ ಹೋದನು. ಅಲುಗದೆ ಬಿದ್ದಿರುವವರಲ್ಲಿ ಜೀವ ಇದೆಯೋ ಇಲ್ಲವೋ ಎಂದು ಪರೀಕ್ಷಿಸಿ ನೋಡಿದನು.

ಒಬ್ಬನಂತೂ ಆಗಲೇ ಸತ್ತಿದ್ದನು. ಸಾಯುವ ಸ್ಥಿತಿಯಲ್ಲಿದ್ದ ಇನ್ನೊಬ್ಬನು ಮಂದರದೇವನ ಕಡೆಗೆ ಕೈಯೆತ್ತಿ ಸಮೀಪಬರುವಂತೆ ಸಂಜ್ಞೆಮಾಡುತ್ತಿದ್ದನು. ಮಂದರದೇವನು ಅವನ ಹತ್ತಿರಹೋಗಿ ಕುಳಿತನು. ಆತನು ಮರಣವೇದನೆಯಿಂದ ಬಿಕ್ಕುತ್ತ, "ಮಹಾರಾಜರೇ, ನಾವಿಬ್ಬರೂ ನಿಮಗೆ ದ್ರೋಹಮಾಡಿದೆವು. ಈ ನೀಚಕಾರ್ಯಕ್ಕೆ ನಾವು ತಲೆಹಾಕಿದ್ದು ಧನದ ಆಸೆಗಾಗಿ ಅಲ. ತನಗೆ ಸಹಾಯಮಾಡದೇ ಹೋದರೆ ನಮ್ಮ ಕುಟುಂಬವನ್ನೇ ಸರ್ವನಾಶ ಮಾಡುವೆನೆಂದು ಆ ನೀಚ, ನರವಾಹನ ಮಿತ್ರ ನಮಗೆ ವರ್ತಮಾನ ಕಳಿಸಿದ್ದ. ನಾವು ಕುಂದಲಿನೀ ದ್ವೀಪದವರೆಂಬುದು ನಿಮಗೆ ಗೊತ್ತಿದೆಯಷ್ಟೆ? ನಮ್ಮ ದ್ರೋಹಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ದೇವರೇ ಕೊಟ್ಟನು. ಆದರೆ ನಿಮಗೆಮಾಡಿದ ದ್ರೋಹಕ್ಕೆ ಪರಿಹಾರವಾಗಿ ಒಂದು ಮಾತು ಹೇಳುತ್ತೇನೆ. ಅದಕ್ಕೇ ಇನ್ನೂ ಪ್ರಾಣ ಉಳಿದಿದೆ.

ನೀವು ಯಾವಕಾರಣದಿಂದಾದರೂ ಈ ದ್ವೀಪವನ್ನು ಬಿಡುವಾಗ, ಇಲ್ಲಿಗೆ ನೇರಾಗಿ ಕಾಣುವ ಆ ತೆಂಗಿನ ತೋಪುಗಳಾಚೆಗೆ ತೀರಕ್ಕೆ ಅಡಗಿಕೊಂಡು ಎರಡು ದೋಣಿಗಳಿವೆ! ಅದರಲ್ಲಿ ತಪ್ಪಿಸಿಕೊಳ್ಳಿರಿ ಪ್ರಭೂ!" ಎನ್ನುವಷ್ಟರಲ್ಲೇ ಅವನ ಪ್ರಾಣ ಪಕ್ಷಿ ಹಾರಿ ಹೋಯಿತು.

ಮಂದರದೇವನು ಎದ್ದುನಿಂತು ತನ್ನ ಕೋಟೆಯ ಕಡೆಗೆ ಪರೀಕ್ಷಿಸಿ ನೋಡಿದನು. ಕೋಟೆಯ ಬುರುಜುಗಳ ಮೇಲಿನಿಂದ ಸೈನಿಕರು ಮೇಲಿಂದ ಮೇಲೆ





ಬಾಣಗಳನ್ನು ಬಿಟ್ಟುಕೊಂಡೇ ಇದ್ದರು. ಕೆಲವರು ದೊಡ್ಡದೊಡ್ಡ ಗುಂಡುಕಲ್ಲುಗಳನ್ನು ಕೆಳಕ್ಕೆ ಹೊರಳಿಸುತ್ತಿದ್ದರು. ಕುಂಡಲಿನೀ ಸೈನಿಕರು ಏಣಿಗಳಮೂಲಕ ಕೋಟೆಗೋಡೆಯ ಮೇಲೆ ಲಗ್ಗೆಹತ್ತಲು ಪ್ರಯತ್ನ ಮಾಡುತ್ತಿದ್ದರು. ಮೇಲಿನಿಂದ ಬೀಳುವ ಕುದಿ ಕುದಿ ಎಣ್ಣೆಯೂ, ಬೆಂಕಿ ದೊಂದಿಗಳೂ ಅವರ ಪ್ರಯತ್ನವನ್ನು ಭಗ್ನಗೊಳಿಸುತ್ತಿದ್ದುವು. ಆದರೂ ಶತ್ರುಗಳು ಲಗ್ಗೆ ಹತ್ತುತ್ತಲೇ ಇದ್ದರು.

ಅಲ್ಲಿಯ ಪರಿಸ್ಥಿತಿಯನ್ನು ಗಮನಿಸಿದಾಗ ಕೋಟೆ ಶತ್ರುಗಳ ಕೈಸೇರುವುದು ಖಂಡಿತವೆಂದು ಮಂದರದೇವನಿಗೆ ತಿಳಿಯಿತು. ಇಂತಹ ತುಫಾನಿನ ಸಮಯದಲ್ಲಿಯೂ ಕುಂಡಲಿನೀ ಸೈನಿಕರು ಇಷ್ಟರ ಮಟ್ಟಿಗೆ ಮುಂದುವರಿದಿದ್ದಾರೆ. ತಾನು ಈಗ ಶತ್ರು ಸೈನಿಕರ ಹಿಂದಿನ ಭಾಗದಲ್ಲಿರುವವನು. ಕೇವಲ ಈ ನಾಲ್ವರು ಸೈನಿಕರೊಂದಿಗೆ ಹುಚ್ಚು ಆವೇಶದಿಂದ ಅವರನ್ನು ಹೊಡೆಯಲು ಓಡುವುದೆಂದರೆ ಆತ್ಮಹತ್ಯೆಮಾಡಿಕೊಳ್ಳುವುದಕ್ಕೆ ಸಮಾನವೇಸರಿ! ತಪ್ಪಿಸಿಕೊಂಡು ಸಮಯ ಸಾಧಿಸಿಕೊಳ್ಳುವುದೇ ಪ್ರಕೃತೋಚಿತ.

ಮಂದರದೇವನು ಹೀಗೆ ಯೋಚಿಸುತ್ತಿರಲು, ಅಗ್ನಿಪರ್ವತವು ಸಿಡಿದಹಾಗೆ ಭಯಂಕರ ಶಬ್ದ ಕೇಳಿಸಿತು. ನಿರ್ವಿಣ್ಣನಾಗಿ ಮಂದರದೇವನು ಕೋಟೆಯನ್ನು ನೋಡಿದನು. ಕೋಟೆಯ ಬುರುಜಿನ ಬುಡದಲ್ಲಿಯ ದೊಡ್ಡದೊಂದು ಭಾಗವೇ ಪುಡಿಪುಡಿಯಾಗಿ ಆಕಾಶಕ್ಕೆ ಹಾರಿ ನೆಲಕ್ಕೆ ಬೀಳುವುದನ್ನು ನೋಡಿದನು. ಆ ಭಾಗವಷ್ಟೂ ನೆಲಕ್ಕೆ ಒರಿದು ಬಿದ್ದಿತ್ತು! ಸೈನಿಕರ ಹಾಹಾಕಾರಗಳೂ, ಜಯಘೋಷಗಳೂ ಆಕಾಶಕ್ಕೇರುತ್ತಿದ್ದುವು. ಅವರಿಗೀಗ ಕೋಟೆ ತೆರೆದ ಬಾಗಿಲೇ ಆಯಿತು.

"ಆಯಿತು! ಸರ್ವವೂ ನಾಶವಾಯಿತು! ಕುಂಡಲಿನೀ ಸೈನಿಕರು ಮದ್ದುಗುಂಡು ತುಂಬಿಸಿ ಕೋಟೆಗೋಡೆಯನ್ನು ಕೆಡವಿದರು. ನಾವು ಕ್ಷಣದಲ್ಲಿ ಸೋತಹಾಗೆಯೇ! ಇನ್ನು ಸ್ವಲ್ಪವೂ ಆಶೆಯಿಲ್ಲ. ವಿಶ್ವಾಸದ ಮಂತ್ರಿ, ಮುಂತಾದವರ ಗತಿ ಏನಾಗುವುದೋ!" ಎಂದು ಮಂದರದೇವನು ಬಾಯಿಬಿಟ್ಟೇ ಹೇಳಿಕೊಂಡನು.

"ಹೌದು ಮಹಾರಾಜರೇ! ಬಹಳ ಘೋರವೇ ಆಯಿತು." ಎಂದು ಪಕ್ಕದಲ್ಲಿದ್ದ ಆ ನಾಲ್ವರು ಸೈನಿಕರೂ ತಲೆತಗ್ಗಿಸಿದರು.

ಇನ್ನು ತಾನು ಮರಾಳದ್ವೀಪವನ್ನು ಬಿಡಲೇಬೇಕು. ಒಂದುಸಾರಿ ಶತ್ರುವಿನಿಂದ ಕೋಟೆ ಭೇದಿಸಲ್ಪಟ್ಟಿತೆಂದರೆ ಆ ಮೇಲೆ ಅದನ್ನು ಅವರು ವಶಪಡಿಸಿಕೊಂಡ ಹಾಗೆಯೇ ಆಯಿತು. ಆ ಕೆಲಸದ ಗಡಿಬಿಡಿ ಮುಗಿದಕೂಡಲೆ ಶತ್ರುಗಳು ತನ್ನನ್ನು ಹುಡುಕುವುದು ಖಂಡಿತ. ತಾನು ಖೈದಿಯಾಗಿ ಸಿಕ್ಕಿಬಿದ್ದರೆ, ಚಿತ್ರಹಿಂಸೆಗೆ ಗುರಿಯಾಗದೆ ಹೋದರೂ, ಆ ಕ್ರೂರ ನರವಾಹನಮಿತ್ರನ ಕೈಯಲ್ಲಿ ಅವಮಾನವಂತೂ ನಿಜ. ಅದಕ್ಕಿಂತ ಸಮುದ್ರದಲ್ಲಿ ಮುಳುಗಿ



ಸಾಯುವುದೇ ಮೇಲು! ಮನುಷ್ಯನಿಗೆ ಅವಮಾನಕ್ಕಿಂತ, ಹೆಚ್ಚಿನ ಶಿಕ್ಷೆ ಬೇರೆ ಏನಿದೆ ?

"ನಡೆಯಿರಿ. ಈ ದ್ರೋಹಿ ಹೇಳಿದ ದೋಣಿಯ ವಿಷಯ ನೋಡೋಣ. ಸುಳ್ಳು ಹೇಳಿರಲಾರನು. ಮರಾಳದೇವಿಯ ಕರುಣವಿದ್ದರೆ, ನಾವು ಸುರಕ್ಷಿತವಾಗಿ ಇನ್ನೆಲ್ಲಿಯಾದರೂ ತೀರ ಸೇರಬಹುದು. ಆ ದೇವಿಯ ಸಹಾಯದಿಂದಲೇ ನಮ್ಮ ರಾಜ್ಯವನ್ನು ಮತ್ತೆ ಜಯಿಸಲೂ ಸಾಧ್ಯವಾದೀತು! ದುಷ್ಟತನಕ್ಕೆ ಎಂದಿಗೂ ಚಿರಾಯುಷ್ಯವಿರಲು ಸಾಧ್ಯವಿಲ್ಲ. ಈಗ ಧೈರ್ಯವೇ ನಮಗೆ ಜತೆ!" ಎಂದನು ಮಂದರದೇವ.

ಸೈನಿಕರು ಚಿಂತೆಯ ನೋಟದಿಂದ ಕೋಟೆಯ ಕಡೆಗೆ ನೋಡಿದರು. ಕೋಟೆಯ ಬುರುಜಿನ ಮೇಲಿನಿಂದ ಮರಾಳ ಸೈನಿಕರ ಯಾವ ಪ್ರತಿಭಟನೆಯೂ ಕಾಣಲಿಲ್ಲ. ಕುಂಡಲಿನೀ ಸೈನಿಕರು ನಿಚ್ಚಣಿಕೆಗಳ ಸಹಾಯದಿಂದ ನಿರ್ಭಯ, ನಿರಾತಂಕವಾಗಿ ಕೋಟೆಯ ಗೋಡೆಯನ್ನು ಏರಿಕೊಂಡಿದ್ದರು. ಅವರನ್ನು ತಡೆಯುವವರೇ ಇಲ್ಲ. ಕೆಲವರು ಕುಂಡಲಿನೀ ಧ್ವಜವನ್ನು ಎತ್ತರವಾದ ಬುರುಜಿನ ಮೇಲೆ ಏರಿಸುವ ಕಾರ್ಯದಲ್ಲಿರುವುದೂ ಕಂಡಿತು.

ಮಂದರದೇವನು ದೀರ್ಘವಾದೊಂದು ಶ್ವಾಸವನ್ನು ಬಿಟ್ಟು ಮುಂದಕ್ಕೆ ನಡೆದನು. ತಮ್ಮ ರಾಜನು ನಿರಾಯುಧನಾಗಿರುವುದನ್ನು ನೋಡಿ ಒಬ್ಬ ಸೈನಿಕನು ಸತ್ತು ಬಿದ್ದ ಅಂಗರಕ್ಷಕರ ಒಂದು ಕತ್ತಿಯನ್ನು ತೆಗೆದು ರಾಜನಿಗೆ ಕೊಟ್ಟನು. ಎಲ್ಲರೂ ಸಮುದ್ರ ತೀರದಲ್ಲಿ ಕಾಣುವ ತೆಂಗಿನತೋಪಿನ ಕಡೆಗೆ ನಡೆದರು. ಗುಡುಗೂ ಮಿಂಚೂ ಗಾಳಿಮಳೆಯೂ ಇನ್ನೂ ಬರುತ್ತಲೇ ಇದ್ದುವು. ಆದರೆ ಸಮುದ್ರದ ಅಬ್ಬರ ಬಹಳ ಮಟ್ಟಿಗೆ ತಗ್ಗಿದ್ದಿತು.

ನಿರಾಶೆ ನಿರುತ್ಸಾಹಗಳಿಂದ ಕುಂದಿಹೋಗಿ ಮೌನವಾಗಿ ನಡೆಯುವವರ ಕಿವಿಗಳಿಗೆ, ತಮ್ಮ ಹಿಂದೆ ತುಸುದೂರದಲ್ಲಿ ಏನೋ ಕೋಲಾಹಲ ಕೇಳಿಬರಲು ಅವರು ಹಿಂದಿರುಗಿ ನೋಡಿದರು. ಕೋಟೆಯ ಕಡೆಯಿಂದ ಅವರ ಕಡೆಗೇ ಧಾವಿಸಿಬರುತ್ತಿದ್ದರು ಕೆಲವು ಮಂದಿ ಅಶ್ವಿಕ ವೀರರು! ಅವರು ಯಾರಾಗಿರಬಹುದೆಂದು ಒಂದು ಕ್ಷಣ ನಿಂತು ನೋಡಿದನು ಮಂದರದೇವ.

ಮಂದರದೇವನು ದೊಡ್ಡ ದನಿಯಿಂದ, "ಅಹೋ ಹೋ! ಅವರು ಕುಂಡಲಿನೀ ಸೈನಿಕರೇ! ನಮ್ಮನ್ನು ಹಿಡಿದು ಬಂಧಿಸಲಿಕ್ಕೇ ಬರುತ್ತಿದ್ದಾರೆ! ಈ ಮೈದಾನ ಪ್ರದೇಶದಲ್ಲಿ ಅಶ್ವಿಕರನ್ನು ಇದಿರಿಸುವುದು ಅಪಾಯಕರವೇ. ಬೇಗನೇ ಆ ತೆಂಗಿನತೋಪನ್ನು ತಲುಪಬೇಕು" ಎಂದು ಆ ಕಡೆಗೆ ಓಡತೊಡಗಿದನು. ಸೈನಿಕರು ಕೂಡಾ ರಾಜನನ್ನು ಬೆಂಬತ್ತಿ ಓಡಿದರು. ಎಲ್ಲರೂ ತೆಂಗಿನತೋಪನ್ನು ಸೇರಿ ಮರಗಳಹಿಂದೆ ಹೊಂಚಿ ಕುಳಿತರು. ನಿಮಿಷ ಮಾತ್ರದೊಳಗೆ ಆ ಸ್ಥಳದಲ್ಲಿ ಯಾರೂ ಇಲ್ಲವೇನೋ ಎಂಬಂತೆ ನಿರ್ಜನವಾಯಿತು!



ಶತ್ರು ಸೈನಿಕರು ಆ ತೋಪಿನ ಕಡೆಗೇ ವಾಯು ವೇಗದಿಂದ ಬರುತ್ತಿದ್ದರು. ಮಂದರದೇವನು ಬಿಚ್ಚುಗತ್ತಿಯನ್ನು ಸಿದ್ಧಪಡಿಸಿಕೊಂಡು ಸಮೀಪದಲ್ಲೇ ಕಾಣುವ ಸಮುದ್ರವನ್ನು ನೋಡಿದನು. ದ್ರೋಹಿಯಾದ ಅಂಗರಕ್ಷಕನು ಸಾಯುವ ಮೊದಲು ಹೇಳಿದಂತೆ ಅಲ್ಲಿ ಎರಡು ದೋಣಿಗಳಿರುವುದು ಕಾಣುತಿತ್ತು. ಒಮ್ಮೆಗೇ ಓಡಿಹೋಗಿ ಆ ದೋಣಿಗಳ ನ್ನೇರಿಕೊಂಡು ಸಮುದ್ರಮಾರ್ಗವನ್ನು ಹಿಡಿಯುವುದು ಕ್ಷೇಮವೇನೋ ಎಂದು ಒಮ್ಮೆ ಅನಿಸಿತು. ಆದರೆ ಎರಡನೇ ದಿಕ್ಕಿಗೆ ನೋಡಿದಾಗ ಶತ್ರುಗಳಾದ ಅಶ್ವಿಕರು ಹದಿನೈದು ಮಂದಿಗಳು ಕಂಡುಬಂದರು. ದೃಢಗಾತ್ರರಾದ ಅವರು ತಳತಳಿಸುವ ಕತ್ತಿಗಳನ್ನು ಝಳಪಿಸಿಕೊಂಡು ಓಡಿ ಬರುತ್ತಿದ್ದಾರೆ. ಅವರನ್ನು ಇದಿರಿಸದೆ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲದಂತಹ ಪರಿಸ್ಥಿತಿ!

"ವಿಜಯವೋ! ವೀರ ಸ್ವರ್ಗವೋ! ಬೇರೆ ಮಾರ್ಗವೇನಿಲ್ಲ" ಎನ್ನುತ್ತ ಮಂದರದೇವನು ಕತ್ತಿ ಝಳಿಪಿಸುತ್ತ ತನ್ನ ಸೈನಿಕರಿಗೂ ಎಚ್ಚರಿಕೆ ಕೊಟ್ಟನು. ಅವರು ಕೂಡಾ ಬಿಚ್ಚುಗತ್ತಿಗಳೊಂದಿಗೆ ಅಡಗಿ ನಿಂತಿದ್ದರು.

ಹೀಗೆ ಇವರು ಯಾವ ಮರದ ಹಿಂದೆ ಇರುವರೆಂಬುದು ತಿಳಿಯದ ಕುಂಡಲಿನೀ ಅಶ್ವಿಕರು ತಮ್ಮ ಕುದುರೆಗಳೊಂದಿಗೆ ಮರಗಳ ನಡುವಿಗೆ ಬಂದೇ ಬಿಟ್ಟರು. "ಜೈ ಭವಾನೀ!" ಎಂದು ಕೂಗಿ, ಮಂದರದೇವನು ಹೆಬ್ಬುಲಿಯ ಹಾಗೆ ಹಾರಿ ಒಬ್ಬ ಶತ್ರು ಸೈನಿಕನ ಕಂಠವನ್ನು ಕಡಿದು ಹಾಕಿದನು.

ಒಮ್ಮೆಗೇ ಹೊರಟ ಮಂದರದೇವನ ಸಿಂಹಗರ್ಜನೆಯಿಂದ ಕುಂಡಲಿನೀ ಅಶ್ವಿಕರು ತತ್ತರಿಸಿದರು. ಮರಗಳ ಮಧ್ಯದ ಇಕ್ಕಟ್ಟಾದ ಜಾಗದಲ್ಲಿ ಸಿಕ್ಕಿಕೊಂಡ ಕುದುರೆಗಳನ್ನು ಎತ್ತ ತಿರುಗಿಸಲಿಕ್ಕೂ ಸಾಧ್ಯವಾಗದೆ ಅವರು ತಬ್ಬಿಬ್ಬಾದರು. ಅದೇ ಸಂಧಿ ಸಾಧಿಸಿ ಮಂದರದೇವನೂ, ಅವನ ಸೈನಿಕರೂ ಅಶ್ವಿಕರಲ್ಲಿ ಒಬ್ಬೊಬ್ಬನನ್ನೇ ತಮ್ಮ ಹರಿತಕತ್ತಿಗಳಿಂದ ಹೊಡೆಯ ತೊಡಗಿದರು. ಅಶ್ವಿಕರಲ್ಲಿ ನಾಲ್ಕೈದುಮಂದಿ ನೆಲಕ್ಕುರುಳಿದಕೂಡಲೇ, ಹೀಗೆ ಪ್ರಯೋಜನವಿಲ್ಲವೆಂದುಕೊಂಡು ಎಲ್ಲರೂ ಕುದುರೆಯಿಂದ ಕೆಳಗಿಳಿದು ಮಂದರದೇವನನ್ನೂ ಅವನ ಸೈನಿಕರನ್ನೂ ಇದಿರಿಸಿದರು. ತೆಂಗಿನ ಮರಗಳ ನಡುವೆ ಬಾಹಾಬಾಹೀ ಯುದ್ಧವು ಪ್ರಾರಂಭವಾಯಿತು. ಆ ಸಂಕುಲಸಮರದಲ್ಲಿ ಕತ್ತಿಯ ಪೆಟ್ಟುಗಳು ಶತ್ರುಗಳಿಗೂ, ಅವರ ಕುದುರೆಗಳಿಗೂ ತಗಲಿದುವು. ಕೆಲವು ಪೆಟ್ಟುಗಳು ಗುರಿತಪ್ಪಿ ಮರಗಳ ಕಾಂಡಗಳಿಗೆ ಬೀಳುತ್ತಿದ್ದುವು.

ಇಂತಹ ಹೋರಾಟವು ಒಂದು ಗಂಟೆಯ ವರೆಗೆ ನಡೆಯುತ್ತಿರಲು ಕುಂಡಲಿನೀ ಸೈನಿಕರೊಳಗಿನ, ಅನೇಕರು ಸತ್ತು ಸುಮ್ಮನಾದರು. ಮರಗಳ ಮರೆಯಲ್ಲಿ ತಪ್ಪಿಸಿಕೊಂಡು ಅಡಗುತ್ತಾ ಯುದ್ಧ ಮಾಡುವ ಮಂದರದೇವನೂ, ಅವನ ಸೈನಿಕರೂ ಅನೇಕಮಂದಿ ಶತ್ರುಗಳನ್ನು ಕೊಂದು ಹಾಕಿದರು.

ಅಲ್ಲಿಗೆ ಬಂದಿದ್ದ ಹದಿನೈದು ಮಂದಿ ಕುಂಡಲಿನೀ ಸೈನಿಕರಲ್ಲಿ ಅಧಿಕ ಭಾಗದವರು ಸಾಯುವುದೋ ಗಾಯಗೊಂಡು ಬಿದ್ದು ನರಳುವುದೋ ಪ್ರಾರಂಭವಾದುದನ್ನು ನೋಡಿ, ಉಳಿದವರ ಧೈರ್ಯವೆಲ್ಲ ಕುಂದಿಹೋಯಿತು. ಮತ್ತೇನಿದೆ? ಅಳಿದುಳಿದ ಶತ್ರುಗಳು ಹಿಂದಿರುಗಿ ಓಡ ತೊಡಗಿದರು. ಮಂದರದೇವನ ಸೈನಿಕರು ಓಡುವವರನ್ನು ಬೆಂಬತ್ತಿ, ಹೊಡೆದು ಅಳವಿಗೆ ಸಿಕ್ಕಿದ ಮತ್ತೆ ಕೆಲವರನ್ನು ಕೊಂದರು.

ಸ್ವಲ್ಪ ಹೊತ್ತಿಗೆ ಅಲ್ಲಿ ಎದ್ದ ಶಬ್ದಗಳೆಲ್ಲಾ ಅಡಗಿತು. ಆಕಾಶದಿಂದ ಆಗಾಗ ಹೊಡೆಯುವ ಗುಡುಗಿನ ದನಿಯು ಹೊರತು ಬೇರೆ ಶಬ್ದಗಳೇನೂ ಕೇಳಲಿಲ್ಲ. ಸೋತು ಓಡುತ್ತಿರುವ ಸೈನಿಕರು ತಮ್ಮ ಕುದುರೆಗಳನ್ನು ಆ ತೆಂಗಿನತೋಪಿನಲ್ಲಿಯೇ ಬಿಟ್ಟು ಕೋಟೆಯ ಕಡೆಗೆ ಓಡಿ ಹೋಗಿದ್ದರು. ಅಷ್ಟು ಹೊತ್ತಿಗೆ ಕೋಟೆ ಕುಂಡಲಿನೀ ದ್ವೀಪವಾಸಿಗಳಿಗೆ ವಶವಾಗಿ ಹೋಗಿತ್ತು. ರಾಜಪ್ರಾಸಾದ ಪ್ರಾಂತದಲ್ಲಿ ಮಾತ್ರ ಇನ್ನೂ ಕೆಲ ಮಂದಿ ಸ್ವಾಮಿ ಭಕ್ತರಾದ ಮರಾಳ ಸೈನಿಕರು ಅಟ್ಟಹಾಸ ಮಾಡಿಕೊಂಡಿದ್ದರು.

ಮಂದರದೇವನಿಗೂ ಅವನ ಸೈನಿಕರಿಗೂ ಅಲ್ಪ ಸ್ವಲ್ಪ ಗಾಯಗಳಷ್ಟೇ ಆಗಿದ್ದುವು. ಆದರೆ ಎಲ್ಲರೂ ತುಂಬಾ ಬಳಲಿ ಬಸವಳಿದು ಹೋಗಿದ್ದರು.

ಮಂದರದೇವನು ಕತ್ತಿಯನ್ನು ಒರೆಯೊಳಗೆ ಸೇರಿಸಿ, "ಇನ್ನು ನಾವು ಇಲ್ಲಿ ತಡಮಾಡುವುದು ಕ್ಷೇಮವಲ್ಲ. ಕೆಲವರು ತಪ್ಪಿಸಿಕೊಂಡು ಓಡಿದವರಿದ್ದಾರೆ. ಅವರಿಂದ ಮತ್ತಷ್ಟು ಶತ್ರುಗಳು ಇಲ್ಲಿಗೆ ಬರುವುದರೊಳಗೆ ನಾವು ಪಲಾಯನ ಮಾಡಬೇಕು" ಎನ್ನುತ್ತ, ಹತ್ತಿರದಲ್ಲಿರುವ ದೋಣಿಗಳ ಕಡೆಗೆ ಬೇಗ ಬೇಗನೇ ಹೋದನು. ನಾಲ್ವರು ಸೈನಿಕರೂ ಒಮ್ಮೆ ಮಾತ್ರ ಕೋಟೆಯ ಕಡೆಗೆ ನೋಡಿ, ಅಲ್ಲಿರುವ ಮಂತ್ರಿ ಮುಂತಾದವರ ಗತಿ ಏನಾಯಿತೋ ಎಂದು ಚಿಂತಿಸುತ್ತ, ತಮ್ಮ ಒಡೆಯನನ್ನು ಅನುಸರಿಸಿದರು.

ದ್ರೋಹಿ ಅಂಗರಕ್ಷಕನು ಹೇಳಿದಂತೆ, ಆ ಸಮುದ್ರ ತೀರದಲ್ಲಿ ಎರಡು ದೋಣಿಗಳೇನೋ ಇದ್ದುವಾದರೂ ಅವು ಸಮುದ್ರದಲ್ಲಿ ದೂರಪ್ರಯಾಣಕ್ಕೆ ಉಪಯೋಗವಾಗುವಂಥವೇ ಅಲ್ಲ. ಚಿಕ್ಕದಾದ ಸಾಧಾರಣ ದೋಣಿಗಳು. ತೆರೆಚಾಪೆಗಳ ಸಾಧನಗಳೊಂದಿಗೆ ಅದರಲ್ಲಿ ಪ್ರಯಾಣಿಸುವಂತಿಲ್ಲ. ಹುಟ್ಟುಗಳನ್ನು ತೊಳಸಿಕೊಂಡೇ ಅವುಗಳನ್ನು ನಡೆಸಬೇಕಾಗಿದೆ.

ಮಂದರದೇವನು ಆ ದೋಣಿಗಳನ್ನು ಪರೀಕ್ಷಿಸಿ, ಥಟ್ಟನೆ ಏನೋ ಆಲೋಚನೆ ಬಂದವನಂತೆ "ಹೋ!" ಎಂದು ಉದ್ಗಾರ ತೆಗೆದು ಸೈನಿಕರ ಕಡೆಗೆ ಚಿಂತಿಸುವವನಂತೆ ನೋಡಿದನು. ಒಡೆಯನ ಚಿಂತೆಗೆ ಕಾರಣ ತಿಳಿಯದೆ ಸೈನಿಕರೂ ಬೆರಗಾದರು.—(ಇನ್ನೂ ಇದೆ)





ನಾಳು ಹೆಚ್ಚಿನ ಬಲದೊಂದಿಗೆ ಬಂದು ನಮ್ಮನ್ನು ಮುತ್ತುತ್ತಾರೆ. ಆಗ ತಪ್ಪಿಸಿಕೊಳ್ಳಲು ನಮಗಾಗದು. ಅಂತಲೇ ನಾವು ಈ ಚಿಕ್ಕ ದೋಣಿಗಳಲ್ಲಿ ಮಹಾಸಮುದ್ರದ ಮೇಲೆ ಹೊರಟು ಯಾವ ಕಾಣದ ದ್ವೀಪಕ್ಕಾದರೂ ಹೋಗಲೇ ಬೇಕಾಗಿದೆ. ಪ್ರಯಾಣಕಾಲದಲ್ಲಿ ಯಾವ ಕ್ಷಣದಲ್ಲಿ ಏನು ಅಪಾಯ ತಲೇ ಮೇಲೆ ಬರುವುದೋ ಹೇಳುವಂತಿಲ್ಲ. ನನ್ನೊಂದಿಗೆ ನಿಜಕ್ಕೂ ನೀವು ನಾಲ್ವರೂ ಸಹ ಈ ದ್ವೀಪವನ್ನು ಬಿಟ್ಟು ಬರಬಲ್ಲಿರಾ ?"

ಕೂಡಲೇ ನಾಲ್ವರು ಸೈನಿಕರೂ ಒಗ್ಗೊರಲಿನಿಂದ, "ಮಹಾರಾಜರೇ ! ಇದೆಂಥ ಪ್ರಶ್ನೆ ಪ್ರಭೂ ! ನಾವು ಇಷ್ಟುಕಾಲದ ವರೆಗೆ ನಿಮ್ಮ ಆಶ್ರಯದಲ್ಲಿ ಬದುಕಿದವರು. ಕಷ್ಟಕಾಲದಲ್ಲಿ ನಿಮ್ಮನ್ನು ಬಿಟ್ಟು ಹೋಗುವಂಥ ವಿಶ್ವಾಸವಿಲ್ಲದವರು ನಾವಲ್ಲ ಪ್ರಭೂ !" ಎಂದರು. ತನ್ನ ಸೈನಿಕರ ರಾಜಭಕ್ತಿಯನ್ನು ನೋಡಿ ಮಂದರದೇವನ ಹೃದಯವು ದ್ರವಿಸಿತು. ಅವರನ್ನು ಮೆಚ್ಚಿಕೊಳ್ಳುತ್ತ, "ನಾನು ನಿಮ್ಮ ರಾಜಭಕ್ತಿಯನ್ನು ಸ್ವಲ್ಪವೂ ಶಂಕಿಸಿ ಮಾತಾಡಲಿಲ್ಲ. ನಾನೇನೋ ಈವರೆಗೂ ಅವಿವಾಹಿತನಾಗಿರುವವನು. ಯಾವ ಬಂಧನವೂ ಇಲ್ಲದವನು. ಯುದ್ಧ ಪ್ರಕಟನೆ ಮೊದಲಾದ ಯಾವುದೇ ರಾಜಧರ್ಮವನ್ನು ಪಾಲಿಸದೆ ಹಠಾತ್ತಾಗಿ ನಮ್ಮ ರಾಜ್ಯದ ಮೇಲೆ ದಾಳಿಮಾಡಿ ವಶಪಡಿಸಿಕೊಂಡನಲ್ಲಾ, ಆ ಧೂರ್ತ ನರವಾಹನ ಮಿತ್ರ ! ಅವನನ್ನು ಎಂದಾದರೂ ಹಿಡಿದು ಹತಮಾಡುವುದೊಂದರ ಹೊರತು ಬೇರೆ ಜೀವಿಕೋದ್ದೇಶ ನನಗಿಲ್ಲ. ಆದರೆ ನೀವು ಹೆಂಡತಿ ಮಕ್ಕಳು, ಬಂಧುಗಳು..." ಎನ್ನಲು ಸೈನಿಕರು "ಗೊತ್ತಾಯಿತು ಪ್ರಭೋ; ಅಂತಹ ಬಂಧನಗಳಾವುದೂ ನಮಗೇನಿಲ್ಲ ಮಹಾರಾಜರೇ." ಎಂದರು ನಾಲ್ವರೂ ಏಕಕಂಠದಿಂದ.

ಮಂದರದೇವನು ಸೈನಿಕರ ಕಡೆಗೆ ವಾತ್ಸಲ್ಯ ಸೂಸುವ ದೃಷ್ಟಿಯಿಂದ ನೋಡಿ, "ಈಗ ನನಗೆ ಸಮಾಧಾನವಾಯಿತು. ಹಾಗಾದರೆ ಸರಿ. ಇನ್ನು ನಾವು ತಡಮಾಡುವುದು ಒಳ್ಳೆಯದಲ್ಲ. ನಡೆಯಿರಿ. ದೋಣಿಗಳನ್ನು ಏರಿಕೊಳ್ಳೋಣ" ಎಂದು ಸಮುದ್ರದ ಕಡೆಗೆ ನಡೆದನು.

ಎರಡು ದೋಣಿಗಳೂ ಅವರನ್ನು ಏರಿಸಿಕೊಂಡು, ಹುಟ್ಟುಗಳ ಸಹಾಯದಿಂದ ಸಮುದ್ರದಲ್ಲಿ ತೂರಿಕೊಂಡು ಹೋದುವು. ಸಮುದ್ರ ಜಲರಾಶಿ ಇನ್ನೂ ಅಲ್ಲೋಲಕಲ್ಲೋಲವಾಗಿಯೇ ಇದ್ದಿತು. ಆದರೆ ತುಫಾನಿನ ವೇಗವು ಕಡಿಮೆಯಾಗುತ್ತಾ ಬರುತ್ತಿದ್ದಿತು. ಮಿಂಚೂ ಗುಡುಗೂ ದೂರದೂರ ಹೋಗುತ್ತಿದ್ದುವು. ಹನಿಮಳೆಯೂ, ಸಣ್ಣಸಣ್ಣ ಗಾಳಿಯೂ ಬರುತ್ತಿದ್ದುವು. ಆಗಲೇ ಸೂರ್ಯನು ಅಸ್ತಮಿಸಿದ್ದನು. ದಿಕ್ಕುಗಳಲ್ಲಿ ಕವಿದು ಬರುತ್ತಿದ್ದ ದಟ್ಟವಾದ ಕತ್ತಲೆಯನ್ನು, ಆಗಲೇ ಮೂಡುತ್ತಿದ್ದ ಹುಣ್ಣಿಮೆ ಚಂದ್ರನು ಸಮುದ್ರ ತೀರದಲ್ಲಿರುವ ಮರಗಳ

ಗುಂಪಿನ ಕಡೆಗೂ, ಸಮುದ್ರ ಗರ್ಭದೊಳಗೂ ತನ್ನ ಬೆಳುದಿಂಗಳನ್ನು ಹಾಯಿಸಿ ಓಡಿಸುತ್ತಿದ್ದನು. ಪ್ರಕೃತಿ ಉಲ್ಲಾಸಿತವಾಗಿತ್ತು.

ದೋಣಿಗಳು ನಿರಾತಂಕವಾಗಿ ಸಮುದ್ರದಲ್ಲಿ ಬಹಳ ದೂರಕ್ಕೆ ಸಾಗಿದುವು. ಯಾವ ದಿಕ್ಕಿಗೆ ಹೋಗುತ್ತೇವೆ ? ಎಲ್ಲಿಗೆ ಹೋಗಬೇಕು ? ಏನು ಮಾಡಬೇಕು ? ಎಂಬ ಆಲೋಚನೆ ಯಾರಿಗೂ ಇರಲಿಲ್ಲ. ಕ್ರೂರನಾದ ನರವಾಹನ ಮಿತ್ರನ ಕೈಗೆ ಸಿಕ್ಕದಿರುವ ವರೆಗೆ ಎಲ್ಲಿಗೆ ಹೋದರೂ ಒಂದೇ ಎಂದು ಮಂದರದೇವನೂ ಸೈನಿಕರೂ ಭಾವಿಸಿಕೊಂಡಿದ್ದರು. ತಮ್ಮನ್ನು ಹುಡುಕಿಕೊಂಡು ಶತ್ರುಗಳು ಬರುವುದಿಲ್ಲವಷ್ಟೆ ? ಎಂದು ನಾಲ್ಕು ಸುತ್ತಲೂ ಕಣ್ಣು ಹರಿಯುವಷ್ಟು ದೂರದವರೆಗೆ ನೋಡಿಕೊಂಡೇ ದೋಣಿಗಳನ್ನು ಸಾಗಿಸುತ್ತಿದ್ದರು. ಅವರ ಪುಣ್ಯದಿಂದ ಚಂದ್ರಕಿರಣ ರೇಖೆಗಳಿಂದ ಸಮುದ್ರವು ಪ್ರಶಾಂತವಾಗಿದ್ದಿತು.

ಹೀಗೆ ನಾಲ್ಕೈದು ಗಂಟೆಗಳಷ್ಟು ಕಾಲ ಸಮುದ್ರದಲ್ಲಿ ಸಾಗುತ್ತಿರಲು ದೂರದಲ್ಲಿ ಸಮುದ್ರದ ಅಲೆಗಳ ಮೇಲೆ ಮಿಣುಕು ಮಿಣುಕು ದೀಪಗಳು ತೇಲಾಡುವ ಕಾಂತಿ ಕಾಣತೊಡಗಿತು. ಅಷ್ಟು ದೊಡ್ಡ ತುಫಾನಿನ ಕಾಲದಲ್ಲಿ ಮೀನು ಹಿಡಿಯುವವರು ಅಷ್ಟು ದೂರದ ವರೆಗೆ ಸಮುದ್ರ ಪ್ರಯಾಣ ಮಾಡುವ ಹಳ್ಳಿಯವರಾರೂ ಇರಲಾರರು. ಹಾಗಾದರೆ ಒಂದು ವೇಳೆ ತಮ್ಮನ್ನು ಹುಡುಕಿ ಹಿಡಿಯಲಿಕ್ಕಾಗಿ ನರವಾಹನ ಮಿತ್ರನು ಕಳುಹಿಸಿದ ದೋಣಿಗಳೇ ಆಗಿರಲಿಕ್ಕಿಲ್ಲವಷ್ಟೆ ? ಹೇಳುವುದು ಕಷ್ಟವೇ !

ಈ ಭಯಸಂಶಯಗಳು ಮಂದರದೇವನನ್ನು ದೋಣಿಯಲ್ಲಿ ಎದ್ದು ನಿಲ್ಲಿಸಿತು. ಮಿನುಗುವ ದೀಪಗಳ ಕಾಂತಿ ಅವರ ಕಡೆಗೇ ಬರುತ್ತಿದ್ದುವು. ಚೆನ್ನಾಗಿ ಪರೀಕ್ಷಿಸಿ ನೋಡಿದಾಗ ಅವು ಸಾಧಾರಣ



ವಾದ ಎರಡು ದೋಣಿಗಳೇ ಎಂದು ಮಂದರದೇವನಿಗೆ ಗೊತ್ತಾಯಿತು. ಹೆಚ್ಚು ದೀಪಗಳಿರುವಂತೆ ಕಂಡುದು ನೀರಿನಲ್ಲಿ ತೋರಿದ ಪ್ರತಿಬಿಂಬಗಳೇ.

ಸ್ವಲ್ಪ ಮಟ್ಟಿಗೆ ಶಾಂತವಾಗಿರುವ ಈ ಸಮುದ್ರದಲ್ಲಿ ಇನ್ನೊಂದು ಸಣ್ಣ ಯುದ್ಧವು ತಪ್ಪುವಂತಿಲ್ಲವೇನೊ ? ಆ ದೀಪಗಳ ಕಾಂತಿಯು ದೋಣಿಯವರು ನಮ್ಮ ಹಾಗೆಯೇ ತಪ್ಪಿಸಿಕೊಂಡು ಹೋಗುವ ನಮ್ಮ ದೇಶದವರೇ ಆದರೆ ಚಿಂತಿಸಬೇಕಾಗಿಲ್ಲ. ಅದಕ್ಕೆ ವಿರುದ್ಧವಾಗಿದ್ದರೆ ಅವು ಕಂಡಲಿನಿಯ ದೋಣಿಗಳೇ ಆಗಿರಬೇಕು. ನಮ್ಮಲ್ಲಿ ಬಿಲ್ಲು ಬಾಣಗಳಿಲ್ಲ ಅಲ್ಲವೇ ?" ಎಂದು ಮಂದರದೇವನು ಸೈನಿಕರಿಗೆ ಪ್ರಶ್ನೆ ಮಾಡಿದನು. ಪ್ರಶ್ನೆಯೊಂದಿಗೇ ಇದೊಂದು ವ್ಯರ್ಥ ಪ್ರಶ್ನೆಯೆಂದು ಅವನಿಗೇ ತೋರಿತು.

ಕೂಡಲೇ ಒಬ್ಬ ಸೈನಿಕನು "ಮಹಾರಾಜಾ. ನಮ್ಮ ಹತ್ತಿರ ಖಡ್ಗಗಳ ಹೊರತು ಮತ್ತೇನೂ ಇಲ್ಲ. ಮಹಾಮಂತ್ರಿಯವರು ನಾವು ನಾಲ್ವರನ್ನೂ

ನಮ್ಮ ರಕ್ಷಣೆಗೆ ಹೋಗುವಂತೆ ಅವಸರಪಡಿಸಿದಾಗ ನಾವು ಹೇಗಿದ್ದೆವೋ ಹಾಗೆಯೇ ಹೊರಟು ಬಂದು ಬಿಟ್ಟೆವು" ಎಂದನು.

"ಪರವಾಗಿಲ್ಲ" ಎಂದು ಮಂದರದೇವನು, "ನಮ್ಮ ಸಂರಕ್ಷಕಿ ಮರಾಳದೇವಿಯ ಕರುಣೆಯೂ ನಮ್ಮ ಪವಿತ್ರವಾದ ಶಕ್ತಿಗಳೂ ನಮ್ಮ ರಕ್ಷಣೆಗೆ ಸಾಕು. ಒಂದು ವೇಳೆ ಮರಣವೇ ತಪ್ಪದೆ ಹೋದರೆ ನಮ್ಮ ಶರೀರವು ಸಮುದ್ರ ಗರ್ಭದ ಮೀನುಗಳಿಗೋ, ಕ್ರಿಮಿ ಕೀಟಗಳಿಗೋ ಆಹಾರವಾಗುತ್ತದೆ. ಅದೂ ಒಳ್ಳೆಯದೇ!" ಎಂದನು.

ಮಂದರದೇವನ ಮಾತುಗಳನ್ನು ಕೇಳಿ ಸೈನಿಕರಿಗೆ ಅತ್ಯಂತ ಧೈರ್ಯ ಬಂದಿತು. ನೋಡ ನೋಡುತ್ತಿದ್ದಂತೆಯೇ ದೂರದಲ್ಲಿದ್ದ ಮಿನುಗುವ ದೀಪಗಳು ಇನ್ನಷ್ಟು ಸಮೀಪ ಬಂದುವು.

ಕಣ್ಣಿನ ಅಳವಿಗೆ ಸರಿಯಾಗಿ ಬರಲು, ಆ ದೋಣಿಗಳಿಂದ ದೀರ್ಘಕಾಯದ ಅಜಾನುಬಾಹುವೊಬ್ಬನು ಕೈಯಲ್ಲಿ ಬಿಲ್ಲಿನೊಂದಿಗೆ ಎದ್ದು ಗುರಿಹಿಡಿದು ನಿಂತುದೂ ಕಾಣಿಸಿತು. ಚಂದ್ರಕಾಂತಿಯಲ್ಲಿ ಅವನ ಮುಖ ಕವಳಿಕೆಗಳು ಸರಿಯಾಗಿ ಕಾಣದೆ ಹೋದರೂ, ಅವನು ಬಲಿಷ್ಠನಾದ ಕಟ್ಟಾಳುವಾಗಿ ಕಂಡುಬಂದನು.

"ಅನುಮಾನವು ನಿಜವಾಯಿತು. ಅವರು ಬಿಲ್ಲು ಬಾಣಗಳೊಂದಿಗೆ ಸರ್ವ ಸನ್ನದ್ಧರಾಗಿ ಬಂದಿದ್ದಾರೆ. ಆದ್ದರಿಂದ ಅವರು ನಮ್ಮ ಕೈಯಳವಿಗೆ ಬರುವ ವರೆಗೆ ನಾವು ಅವರ ಬಾಣಗಳ ಗುರಿಗೆ ತಪ್ಪಲೇ ಬೇಕು. ದೋಣಿಯೊಳಗೆ ಕುಳಿತುಬಿಡುವುದೇ ಈಗಿನ ಉಪಾಯ" ಎಂದು ಮಂದರದೇವನು ಎಚ್ಚರಿಸುವುದರೊಳಗೆ ರಿವ್ವನೆ ಬಂದ ಒಂದು ಬಾಣವು ಮಂದರದೇವನ ದೋಣಿಗೆ ಹೊಡೆಯಿತು.

ಕೂಡಲೇ ಮಂದರದೇವನೂ ಸೈನಿಕರೂ ದೋಣಿಯ ಒಳಭಾಗದಲ್ಲಿ ತಲೆ ಬಗ್ಗಿಸಿಕೊಂಡು ಕುಳಿತರು. ಇದಿರು ಪಕ್ಷದ ದೋಣಿಗಳಲ್ಲಿರುವವರು ಒಬ್ಬರನ್ನೊಬ್ಬರು ಎಚ್ಚರಿಸುವುದೂ, ಬಲವಾಗಿ ಹುಟ್ಟು ಹಾಕುವುದೂ, ಬಗ್ಗಿ ಕುಳಿತ ಮಂದರ



ದೇವನಿಗೂ, ಸೈನಿಕರಿಗೂ ಕೇಳುತ್ತಲೇ ಇದ್ದಿತು. ಅದರಿಂದ ಅವರು ತಮ್ಮನ್ನು ಹತ ಮಾಡಲು ಬರುವ ಶತ್ರುಪಕ್ಷದವರೆಂದೇ ಅರ್ಥವಾಯಿತು. ಅವರು ಎಷ್ಟು ಸಮೀಪ ಬರುವರೆಂಬುದೂ ತಿಳಿಯುತ್ತಿತ್ತು. ಅತಿ ವೇಗದಲ್ಲಿ ಸಮೀಪಿಸುವ ಆ ದೋಣಿಗಳು ತಮ್ಮ ಶಕ್ತಿಯ ಪೆಟ್ಟಿಗೆ ಸಮೀಪ ಬರುವವರೆಗೂ ಮಾತಾಡದೆ ಬಗ್ಗಿ ಕುಳಿತುಕೊಳ್ಳದೆ ಬೇರೇನೂ ಉಪಾಯವಿರಲಿಲ್ಲ. ಆಮೇಲೆ ನಡೆಯುವ ಯುದ್ಧದಲ್ಲಿ ಯಾರ ಅದೃಷ್ಟ ಹೇಗೋ ಹಾಗಾಗುತ್ತದೆ.

ಹೀಗೆ ಆಲೋಚಿಸುತ್ತ ತೆಪ್ಪಗೆ ಹೊಂಚಿ ಕುಳಿತಿದ್ದ ಮಂದರದೇವನಿಗೂ, ಸೈನಿಕರಿಗೂ ತೀರ ಸಮೀಪದಲ್ಲಿ "ಜೈ ಸಮರಸೇನಾ" ಎಂಬ ದೊಡ್ಡ ಗರ್ಜನೆಗಳು ಕೇಳಿಸಿತು. ಇದೆಂತಹ ಹೊಸ ಜಯಘೋಷವೋ ಎಂದು ಅವರು ಆಶ್ಚರ್ಯದಿಂದ ಹೊರಬೀಳುವುದರೊಳಗೆ ಮಂದರದೇವನು ಕುಳಿತ ದೋಣಿಯನ್ನು ಮತ್ತೊಂದು ದೋಣಿ ವೇಗದಿಂದ ತಾಗಿ ಅತಿ ಮೇಲು ಮಾಡುವಷ್ಟರ ಮಟ್ಟಿಗೆ ಹೊಡೆಯಿತು. ಆ ಕ್ಷಣದಲ್ಲಿ ಮಂದರದೇವನು ಕತ್ತಿ ಹಿಡಿದು ಎದ್ದು ನಿಂತನು. ಅದೇ ಕ್ಷಣದಲ್ಲಿ ಅವನ ಬಾಯಿಯಿಂದ ಹೊರಟ "ಜೈ ಮರಾಳೀ !" ಎಂಬ ಸಿಂಹನಾದವು ಸಮುದ್ರ ತರಂಗಗಳಲ್ಲಿ ಮಾರ್ಮೊಳಗಿತು. ಅದರೊಂದಿಗೆ ಮಿಂಚಿನ ಬಳ್ಳಿಯಂತೆ ಸುಳಿದ ಅವನ ಕತ್ತಿ ಒಬ್ಬ ಶತ್ರುವನ್ನು ತಾಗಿತು. ಅವನು ಕೆಟ್ಟ ದನಿಯಿಂದ ಕೂಗಿ ಸಮುದ್ರಕ್ಕೆ ಪ್ರಥಮ ಬಲಿಯಾದನು. ಅಷ್ಟರೊಳಗೆ ಮಂದರದೇವನ ನಾಲ್ವರು ಸೈನಿಕರೂ ಭೀಕರವಾಗಿ ಗರ್ಜಿಸುತ್ತ ಇದಿರಾಳಿಗಳ ದೋಣಿಗಳ ಮೇಲೆ ಹಾರಿದರು. ಆಗ "ಓಹೋಯ್ ! ನಿಲ್ಲಿರಿ ! ತಾಳಿರಿ ! ನಾವು ಶತ್ರುಗಳಲ್ಲ ! ಮಿತ್ರರು ! ಮಿತ್ರರು !" ಎಂದು ಉಚ್ಚ ಕಂಠದಿಂದ ಹೊರಟ ಕೂಗು ಎಲ್ಲರನ್ನೂ ಸ್ತಬ್ಧಗೊಳಿಸಿತು.

ಅಷ್ಟರೊಳಗೇ ಮಂದರದೇವನ ಸೈನಿಕರ ಕತ್ತಿಗಳ ಹೊಡೆತಕ್ಕೆ ಮತ್ತಿಬ್ಬರು ಸೈನಿಕರು ಸಮುದ್ರಕ್ಕೆ ಹೊರಳಿ ಬಿದ್ದುಬಿಟ್ಟರು.





ಮಂದರದೇವನು ಕತ್ತಿಯನ್ನು ಎತ್ತಿ ಹಿಡಿದು ಝಳಿಪಿಸುತ್ತ, "ಯಾರು ನೀವು ? ಹೇಗೆ ಮಿತ್ರರು ? ಕುಂಡಲಿನಿಯನ್ನು ಅಪಹರಿಸಿದ ನರವಾಹನ ಮಿತ್ರನ ಸೈನಿಕರು ಹೌದೋ ಅಲ್ಲವೋ ?" ಎಂದು ಕಠಿಣವಾಗಿ ಪ್ರಶ್ನಿಸಿದನು.

"ನಾವು ಕುಂಡಲಿನೀ ದ್ವೀಪರಾಜ್ಯ ನಿವಾಸಿಗಳೇನೋ ನಿಜವೇ. ಆ ಘಾತುಕನಾದ ನರವಾಹನಮಿತ್ರನು ನಮಗೆ ಪ್ರಬಲ ಶತ್ರು. ನೀವು ಮರಾಳ ದ್ವೀಪ ವಾಸಿಗಳಾದರೆ ನಾವಿಬ್ಬರೂ ಸ್ನೇಹಿತರೇ ಸರಿ. ಮೊದಲು ಕತ್ತಿಗಳನ್ನು ಕೆಳಗಿಳಿಸಿರಿ" ಎಂದನು ಆ ದೀರ್ಘಕಾಯ.

ಅವರ ಮಾತಿನಲ್ಲಿ ಏನಾದರೂ ಮೋಸವಿದೆಯೋ ಎಂಬ ಸಂಶಯವು ಮಂದರದೇವನಿಗಾಯಿತು. ಏಕೆಂದರೆ ನರವಾಹನ ಮಿತ್ರನ ಮೋಸದ ರೀತಿ ಅಂತಹುದು ! ಇವರೆಲ್ಲ ಅವನ [illegible] [illegible] ಕತ್ತಿಗಳಾದರೆ ?

"ಹಾಗಾದರೆ ನಿಮ್ಮ ನಾಯಕನಾರು ? ಅವನ ಹೆಸರೇನು ?" ಎಂದು ಪ್ರಶ್ನಿಸಿದನು ಮಂದರದೇವ.

"ಇಲ್ಲಿ ಈಗ ನಾನೇ ನಾಯಕ. ನನ್ನ ಹೆಸರು ಶಿವದತ್ತ. ಈ ದೋಣಿಗಳಲ್ಲಿರುವವರೆಲ್ಲರೂ ನನ್ನ ಅನುಚರರೇ !" ಎಂದು ಪ್ರತ್ಯುತ್ತರ ಬಂದಿತು.

ಅದನ್ನು ಕೇಳಿದ ಕೂಡಲೇ ಮಂದರದೇವನ ಸಂದೇಹವೆಲ್ಲ ಹಾರಿ ಹೋಗಿ, "ಸ್ವಾಗತ! ಸುಸ್ವಾಗತ! ಶಿವದತ್ತರೇ !" ಎಂದು ಅವನ ಬಳಿಗೆ ಸಾಗುತ್ತಾ, "ಆಹಾ! ಇಪ್ಪತ್ತು ವರ್ಷಗಳ ಹಿಂದೆ, ಅಂದರೆ ನಾನು ಹತ್ತು ವರ್ಷದ ಹುಡುಗನಾಗಿದ್ದಾಗ ನಿಮ್ಮ ಹೆಸರನ್ನೂ, ಕುಂಡಲಿನಿಯ ಮಹಾ ಸೇನಾನಿಗಳಾದ ಸಮರಸೇನರ ಹೆಸರನ್ನೂ ಕೇಳಿದ್ದೇನೆ. ನೀವೂ ಸಮರಸೇನರೂ ಎಲ್ಲಿಯೋ ಭಯಂಕರ ದ್ವೀಪದಲ್ಲಿ ಮಾಡಿದ ಸಾಹಸಮಯ ಕಾರ್ಯಗಳನ್ನು ಕಥೆಗಳ ಹಾಗೆ ಕೇಳುತ್ತಿದ್ದೆ. ಈಗ ಆ ಮಹಾ ಸೇನಾನಿಯ ಮುಖ್ಯ ಸಹಚರರಾದ ನಿಮ್ಮನ್ನು ಇಂತಹ ಆಕಸ್ಮಿಕ ರೀತಿಯಲ್ಲಿ ನೋಡುವ ಭಾಗ್ಯ ನನಗುಂಟಾಗಿದೆ. ಹಾಗಾದರೆ ನಿಮಗೆ ನನ್ನ ಹೃತ್ಪೂರ್ವಕವಾದ ಸುಸ್ವಾಗತವಿದೆ."

"ನೀವು ಯಾರೆಂಬುದನ್ನು ಹೇಳಲೇ ಇಲ್ಲವಲ್ಲ ? ಮರಾಳ ದ್ವೀಪದ ರಾಜ್ಯದವರೆಂದು ನಿಮ್ಮ ಜಯಧ್ವಾನದಿಂದ ಗೊತ್ತಾಗಿದೆ. ಈ ಸಣ್ಣ ದೋಣಿಗಳಲ್ಲಿ ಎತ್ತ ಹೊರಟಿರಿ ? ಅಲ್ಲಿಯ ರಾಜ ಮಂದರದೇವ ನೀವಲ್ಲವಷ್ಟೇ ?" ಎಂದನು ಶಿವದತ್ತ.

"ಸದ್ಯ ಅಲ್ಲವೆಂಬುದು ನಿಜ. ಈಗ ಕೆಲವು ಗಂಟೆಗಳ ಹಿಂದಿನವರೆಗೆ ನಾನು ಮರಾಳ ದ್ವೀಪದ ರಾಜ ಮಂದರದೇವನಾಗಿದ್ದೆ. ಆದರೆ ಈಗ ನಿಮ್ಮ ಮುಂದೆ ಕೇವಲ ಮಂದರದೇವ ಮಾತ್ರನೇ ಆಗಿ ನಿಂತಿದ್ದೇನೆ.

ನನ್ನ ರಾಜ್ಯ, ನನ್ನ ಕಿರೀಟ, ಎಲ್ಲಾ ಆ ಘಾತಕ ನರವಾಹನ ಮಿತ್ರನ ವಶವಾಗಿ ಹೋಯಿತು. ನಾನು

ಹೀಗೆ ಸಮುದ್ರದ ಪಾಲಾಗಿ ಅಲೆಯ ಬೇಕಾಗಿ ಬಂತು." ಎಂದನು ಮಂದರದೇವ.

ಶಿವದತ್ತನು ಏನೂ ಹೇಳದಾದನು. ಅವನ ಅನುಚರರೊಂದಿಗಿರುವ ಆ ಎರಡು ದೋಣಿಗಳೂ ಮಂದರದೇವನ ದೋಣಿಯ ಹತ್ತಿರ ಒರೆಸಿಕೊಂಡು ನಿಂತವು. ಶಿವದತ್ತನು ಮಂದರದೇವನ ದೋಣಿಗೆ ಬಂದನು. ಅವನು ಏನೋ ಮುಖ್ಯ ವಿಷಯ ಹೇಳಲಿಕ್ಕೆ ಹೀಗೆ ಬರುವನೆಂದು ತಿಳಿದು ಮಂದರ ದೇವನು ಅವನಿಗೆ ತನ್ನ ಪಕ್ಕದಲ್ಲಿ ಕುಳಿತುಕೊಳ್ಳಲು ಸ್ಥಳ ತೋರಿಸಿದನು.

ಶಿವದತ್ತನು ಕುಳಿತುಕೊಂಡು, "ರಾಜ್ಯದೊಂದಿಗೆ ರಾಜ ಎಂಬ ಬಿರುದು ಕೂಡಾ ಹೋಯಿತೆಂದರೆ ನಿಮ್ಮ ಮಟ್ಟಿಗೆ ಸತ್ಯವಾದರೂ ಉಳಿದವರು ನಿಮ್ಮನ್ನು ರಾಜರೆಂದೇ ಹೇಳುತ್ತಾರೆ. ಸರಿ, ನಾನು ನಿಮ್ಮನ್ನು ಮಂದರದೇವನೆಂದೇ ಕರೆಯುತ್ತೇನೆ. ಅದಿರಲಿ, ಈಗ ನಿಮ್ಮ ಪ್ರಯಾಣವು ಎತ್ತ ಕಡೆಗೆ ? ನಿಮ್ಮ ಗಮ್ಯಸ್ಥಾನ ಯಾವುದೆಂದು ತಿಳಿಯಬಹುದೆ ?" ಎಂದು ಕೇಳಿದನು.

ಮಂದರದೇವನು ಒಂದು ನಿಟ್ಟುಸಿರು [illegible] ಬಿಟ್ಟನು. ಆಮೇಲೆ ಮುಗುಳುನಗು ಸೂಸಿದನು. "ಶಿವದತ್ತರೇ, ನನ್ನ ಗಮ್ಯಸ್ಥಾನ ಯಾವುದೆಂದು ನನಗೇ ಗೊತ್ತಿಲ್ಲ. ಪವಮಾನನ ಮಿತ್ರನ ಕೈಗೆ ಸಿಕ್ಕಿ ಬೀಳದಂತೆ ತಪ್ಪಿಸಿಕೊಂಡು ಹೋಗುವುದೇ ಪ್ರಸ್ತುತ ದಲ್ಲಿ ನಾನು ಮಾಡುವ ಕೆಲಸವಾಗಿದೆ. ಇವರು ನಾಲ್ವರೂ ನನ್ನ ವಿಶ್ವಾಸದ ಸೈನಿಕರು. ಜೀವಕ್ಕೆ ಜೀವ ಕೊಡುವವರು" ಎಂದನು.

"ಬಹಳ ಚೆನ್ನಾಗಿಯೇ ಸೇರಿದ್ದೇವೆ. ಅಂದರೆ ನಾವಿಬ್ಬರೂ ಒಂದೇ ಬಗೆಯ ಪರಿಸ್ಥಿತಿಯಲ್ಲಿ ಇದ್ದೇವೆಂದಾಯಿತು. ನಾನು ಕೂಡಾ ಆ ಶತ್ರುವಿನ ದೃಷ್ಟಿಯಿಂದ ತಪ್ಪಿಸಿಕೊಳ್ಳಲಿಕ್ಕಾಗಿಯೇ ಹೀಗೆ ಹೊರಟಿದ್ದೇನೆ" ಎಂದನು ಶಿವದತ್ತ.



ಆ ಸಮಯದಲ್ಲಿ ಮಂದರದೇವನ ಸೈನಿಕರಲ್ಲಿ ಒಬ್ಬನು ಎದ್ದು "ಮಹಾರಾಜರೇ ! ಅಲ್ಲಿ ಯಾವುದೋ ಒಂದು ತೀರವು ಕಾಣುವಹಾಗಿದೆ. ಒಂದೇ ಬಾರಿಗೆ ಅಷ್ಟೊಂದು ದೀಪಗಳು ಕದಲುತ್ತಿವೆ. ಏನೋ ಆಶ್ಚರ್ಯವಲ್ಲವೇ ? ಅವೆಲ್ಲಾ ಸಮುದ್ರದಲ್ಲಿ ಹೊರ ಟಿರುವ ದೋಣಿಗಳೆಂದು ಕಾಣುತ್ತದೆ. ಶತ್ರುಗಳು ನಮ್ಮನ್ನು ಹುಡುಕಿಕೊಂಡು ಹೀಗೆ ಬರುತ್ತಿರುವರೋ ಏನೋ ? ಅಥವಾ ಆ ಕಡೆಯ ತೀರದ ಜನರೋ ? ಯಾವುದಕ್ಕೂ ನಾವು ಎಚ್ಚರದಲ್ಲಿ ರೋಣ" ಎಂದನು.

ಶಿವದತ್ತನೂ ಮಂದರದೇವನೂ ಆ ಕಡೆಗೆ ನೋಡಿದರು. ಸೈನಿಕನು ಹೇಳಿದುದರಲ್ಲಿ ಅತಿ ಶಯೋಕ್ತಿ ಏನೂ ಇರಲಿಲ್ಲ. ಆ ತೀರದಲ್ಲಿ ಕಾಣುವ ಪ್ರಾಂತವೆಲ್ಲವೂ ದೀಪಗಳ ಕಾಂತಿಯಿಂದ ಪ್ರಕಾಶಿಸಿ ಕೊಂಡಿತ್ತು. ಗಾಳಿಯಲ್ಲಿ ಹಾರಾಡುವ ದೊಡ್ಡ ದೊಡ್ಡ ಮಿಂಚು ಹುಳಗಳೋ ಎಂಬ ಹಾಗೆ ಸಮುದ್ರ ಜಲದ ತೆರೆಗಳೊಂದಿಗೆ ದೀಪಗಳೊಂದಿಗಿರುವ ದೋಣಿ

ಗಳು ಮೇಲಕ್ಕೂ ಕೆಳಕ್ಕೂ ಇಳಿದೇರಿಕೊಂಡಿದ್ದುವು. "ನಮಗೆ ಅವುಗಳ ಗೊಡವೆಯೇ ಬೇಡ. ಸಮುದ್ರದಲ್ಲಿ ಅವುಗಳ ವಿರುದ್ಧ ದಿಕ್ಕಿಗೆ ಎಷ್ಟು ಮಟ್ಟಿಗೆ ವೇಗವಾಗಿ ಹೋಗಲು ಸಾಧ್ಯವೋ ಅಷ್ಟು ದೂರ ಹೋಗಿಬಿಡುವುದೇ ಒಳ್ಳೆಯದು. ನಮ್ಮ ಅದೃಷ್ಟ ಚೆನ್ನಾಗಿದ್ದರೆ ಯಾವುದಾದರೊಂದು ಸುರಕ್ಷಿತ ದ್ವೀಪವನ್ನು ಸೇರುತ್ತೇವೆ. ಇಲ್ಲಿಗೆ ಸಮೀಪದಲ್ಲಿರುವ ದ್ವೀಪಗಳಾವುವೂ ಸುರಕ್ಷಿತವೆನಿಸಲಾರವು. ತಪ್ಪಿದರೆ ನಮ್ಮ ಹಣೆಬರಹವದಂತಾಗುತ್ತದೆ. ನಾವು ನರವಾಹನ ಮಿತ್ರನ ಕೈಗೆ ಸಿಕ್ಕಿ ಸಾಯುವುದನ್ನು ಮಾತ್ರ ಸಹಿಸಲಾರೆವು" ಎಂದನು ಶಿವದತ್ತ.

"ನಿಜ, ನಿಜ. ನಮ್ಮಿಬ್ಬರಿಗೂ ಒಂದೇ ಮನೋಭಾವವೆಂಬುದು ಸ್ಪಷ್ಟವಾಯಿತು" ಎಂದು ಮಂದರದೇವನು ತಲೆಯಾಡಿಸಿದನು. ನಾಲ್ಕು ದೋಣಿಗಳೂ ಹುಟ್ಟುಗಳ ಸಹಾಯದಿಂದ ಮಹಾ ಸಮುದ್ರದ ಮೇಲೆ ಹೊರಟುವು.

ನಿಜಕ್ಕೂ ಅಲ್ಲಿ ಕಾಣುವ ದೀಪಗಳು ನರವಾಹನ ಮಿತ್ರನ ನಾವಿಕದಳದ ನೌಕೆಗಳದೇ. ಅವು ತಮ್ಮನ್ನು ಕಂಡು ಹಿಡಿದು ಬೆಂಬತ್ತುವುದನ್ನು ನೋಡಿ ಶಿವದತ್ತನು ತನ್ನ ದೋಣಿಗಳಲ್ಲಿದ್ದ ದೀಪಗಳನ್ನು ನಂದಿಸಿ ಹಾಕಿದನು. ಈಗ ನಾಲ್ಕು ದೋಣಿಗಳೂ ಕೇವಲ ಚಂದ್ರಪ್ರಕಾಶದಲ್ಲೇ ಸಾಗತೊಡಗಿದುವು. ಚಂದ್ರನನ್ನು ಮೇಘಗಳು ಮರೆಸಿಕೊಂಡಿದ್ದುದರಿಂದ ಕವಿದ ಮಬ್ಬುಗತ್ತಲೆ ಅವರಿಗೆ ಸಹಾಯಕವೇ ಆಯಿತು. ದೋಣಿಗಳು ಒಂದಕ್ಕೊಂದು ತಾಗಿ ಅಪಾಯ ಉಂಟಾಗದಂತೆ ನಡೆಸುವವರು ಬಹಳ ಜಾಗ್ರತೆಯಾಗಿ ಹುಟ್ಟು ಹಾಕುತ್ತಿದ್ದರು. ಮಂದರದೇವನು ಸುತ್ತಲೂ ಕಣ್ಣು ಹಾಯಿಸಿ ಅಪಾಯವು ದೂರವಾಗುವುದನ್ನು ನೋಡಿ ಸಮಾಧಾನ ಪಟ್ಟು, "ಮಹಾಕಾಳದೇವಿಯ ಕೃಪೆ! ಸದ್ಯ ಭಯ ದೂರ ಹೋಯಿತು. ಈಗ ನಮ್ಮ ದೋಣಿ ಅವರಿಗೆ ಕಾಣುವುದಿಲ್ಲ. ಈಗ ಹೇಳಿರಿ ಶಿವದತ್ತರೇ, ಕುಂಡಲಿನೀ ದ್ವೀಪವಾಸಿಗಳಾಗಿ, ಮಹಾ ಸೇನಾನಿ ಸಮರಸೇನರ ಬಲಗೈಯಂತಿರುವ ನೀವು ಈ ವಿಧವಾಗಿ ಆ ದ್ವೀಪವನ್ನು ಬಿಟ್ಟು ಏಕೆ ತಪ್ಪಿಸಿಕೊಂಡು ಹೋಗಬೇಕಾಗಿ ಬಂತು? ನಿಮ್ಮಂಥವರಿಗೇ ಈ ಗತಿ ಬಂದುದನ್ನು ನೋಡಿ ನನಗೆ ಆಶ್ಚರ್ಯದೊಂದಿಗೆ ನನ್ನ ಕಣ್ಣು ಸಣ್ಣದಾಗುತ್ತದೆ" ಎಂದನು.

"ಅದೆಲ್ಲವೂ ಆ ನರವಾಹನ ಮಿತ್ರನ ಕುಟಿಲ ರಾಜನೀತಿಯ ಪ್ರಭಾವ. ಅದರೂ ಇದರಲ್ಲಿ ಸಮರಸೇನರ ತಪ್ಪೂ ಸ್ವಲ್ಪ ಇಲ್ಲದೆ ಹೋಗಲಿಲ್ಲ. ಆ ಸಂಗತಿಯನ್ನೆಲ್ಲಾ ಹೇಳುತ್ತೇನೆ; ಸಾವಧಾನವಾಗಿ ಕೇಳಿರಿ" ಎಂದು ಶಿವದತ್ತನು ಹೇಳಲು ಪ್ರಾರಂಭಿಸಿದನು. —(ಇನ್ನೂ ಇದೆ)





ಕೊಂಡಿದ್ದೆ. ಇಂಥ ವಿಪರೀತ ಹೇಗಾಯಿತು ?" ಎಂದು ಮಂದರದೇವನು ಕೇಳಿದುದನ್ನು ಕೇಳಿ ಶಿವದತ್ತನು ನಕ್ಕನು.

"ಮಂದರದೇವಾ, ಆ ಧನರಾಶಿಗಳೇ ಕುಂತಲಿನೀ ದ್ವೀಪದ ಅರಾಜಕದ ತಾಂಡವಕ್ಕೆ ಕಾರಣವಾಯಿತೆಂದು ತಿಳಿ ! ನಾವು ಆ ನಾವೆಯೊಂದಿಗೆ ಕುಂತಲಿನೀ ದ್ವೀಪವನ್ನು ತಲುಪಿದಾಗ ರಾಜನಾದ ಚಿತ್ರಸೇನನೂ ಪ್ರಜೆಗಳೂ ನಮಗೆ ಮಾಡಿದ ಸ್ವಾಗತವೇನು, ಸಂಭ್ರಮವೇನು, ಉತ್ಸಾಹವೇನು ! ಎಡೆಬಿಡದೆ ಒಂದು ತಿಂಗಳವರೆಗೆ ರಾಜಧಾನೀ ನಗರವು ಆನಂದೋತ್ಸವಗಳಿಂದ ಮೆರೆಯಿತು. ಚಿತ್ರಸೇನನು ಪ್ರಜೆಗಳ ಮೇಲೆ ನಾಮಮಾತ್ರಕ್ಕಿರುವ ತೆರಿಗೆಗಳನ್ನು ಕೂಡಾ ತೆಗೆದು ಹಾಕಿದನು. ಉದ್ಯೋಗಸ್ಥರ ಸಂಬಳಗಳನ್ನೆಲ್ಲ ಎರಡು ಪಾಲು ಹೆಚ್ಚಿಸಿದನು. ದೊಡ್ಡ ದೊಡ್ಡ ಅಧಿಕಾರಿಗಳಿಗೆ ಮೂರು ನಾಲ್ಕು ಪಾಲಿನಷ್ಟು ಹೆಚ್ಚು ಸಂಬಳವಾಯಿತು" ಎಂದನು.

"ಹಾಗಾದರೆ ಮತ್ತೇನು ? ಕುಂತಲಿನೀ ದ್ವೀಪದ ಪ್ರತಿಯೊಬ್ಬರೂ ಸರ್ವಸುಖಗಳನ್ನೂ ಅನುಭವಿಸುವ ಲೇಸಾಯಿತಲ್ಲಾ ?" ಎಂದನು ಮಂದರದೇವ.

"ಮಂದರದೇವರಾಜಾ, ಅವಸರಪಡದೆ ಸಾವಧಾನವಾಗಿ ಪೂರ್ತಿ ಹೇಳುವುದನ್ನು ಕೇಳೋಣವಾಗಲಿ." ಎಂದು ಶಿವದತ್ತನು ಗಂಟಲು ಕೆರೆದು ಹೇಳಲು ಪ್ರಾರಂಭಿಸಿದನು :

"ಯಾವಾಗ ಧನಾಗಾರವು ಬೆಳ್ಳಿ, ಬಂಗಾರದ ಮಣಿ ಮಾಣಿಕ್ಯಗಳಿಂದ ತುಂಬಿತುಳುಕ ತೊಡಗಿತೋ ಆಗಲೇ ರಾಜನಾದ ಚಿತ್ರಸೇನನಿಗೆ ರಾಜ್ಯಪಾಲನೆಯ ವಿಷಯಗಳಲ್ಲಿ ಆಸಕ್ತಿ ಕುಂಠಿತವಾಗುತ್ತಾ ಹೋಯಿತು. ಬೇಕಾದಷ್ಟು ಧನರಾಶಿಯಂತೂ ಇದೆ ; ಇನ್ನು ದೇಶದ ಪ್ರಜೆಗಳಿಗೆ ಕಷ್ಟವೇನಿದೆ ? ಸಮಸ್ಯೆ ಏನಿದೆ ? ಎಂದು ಮಹಾಸೇನಾಧಿಪತಿ ಸಮರಸೇನನಿಗೂ ತೋರಿತು. ನನಗೆ ಕೂಡಾ ಹಾಗೆಯೇ ಅನಿಸಿತು.

ಚಿತ್ರಸೇನ ಮಹಾರಾಜನು ಉದ್ಯೋಗಸ್ಥರಿಗೂ, ಅಧಿಕಾರಿಗಳಿಗೂ ಸಂಬಳಗಳನ್ನು ಹೆಚ್ಚಿಸಿದನೆಂದು ಹೇಳಿದೆನಷ್ಟೆ? ಆ ಹಣದಿಂದ ಅವರು ಆಮೋದ ವಿಲಾಸಗಳಲ್ಲಿ ಮಗ್ನರಾಗ ತೊಡಗಿದರು. ಇನ್ನು ಹಳ್ಳಿಗಳಲ್ಲಿರುವ ಬೇಸಾಯಗಾರರು ಕೂಡಾ ರಾಜನಿಗೆ ಯಾವ ತೆರಿಗೆಯನ್ನೂ ಕಟ್ಟುವ ಅಗತ್ಯವಿಲ್ಲದೆ ಹೋದುದರಿಂದ ಅವರಿಗೂ ಸೊಂಟ ಬಗ್ಗಿಸಿ ಕೆಲಸ ಮಾಡಬೇಕೆಂಬ ತರಾತುರಿ ತಗ್ಗಿತು. ಅವರು ತಮ್ಮ ಕುಟುಂಬ ಪೋಷಣೆಗೆ ಅಗತ್ಯವಿರುವಷ್ಟು ಧಾನ್ಯಗಳನ್ನೂ, ತರಕಾರಿಗಳನ್ನೂ ಬೆಳೆಸಿಕೊಂಡು, ಉಳಿದ ಹೊಲಗದ್ದೆಗಳನ್ನು ಹಡಿಲು ಬೀಳಿಸಿ ಬಂಜರುಗೊಳಿಸ ತೊಡಗಿದರು. ಅದರಿಂದ ಧಾನ್ಯಗಳನ್ನು ಕೊಂಡು ಕೊಳ್ಳಬೇಕಾದವರಿಗೆ ಆಹಾರಪದಾರ್ಥಗಳು ಸರಿಯಾಗಿ ಸಿಗದಾದುವು. ಪಟ್ಟಣಗಳಿಗೆ ಆಹಾರಪದಾರ್ಥಗಳ ರವಾನೆ ತಗ್ಗಿತು. ಪಟ್ಟಣದ ಜನರು ಗುಂಪುಗುಂಪಾಗಿ ಗ್ರಾಮಗಳಿಗೆ ಹೋಗಿ ಆಹಾರಪದಾರ್ಥಗಳನ್ನು,

ಸ್ಪರ್ಧೆಗಿಳಿದವರಂತೆ ಒಬ್ಬರಿಗೊಬ್ಬರು ಹೆಚ್ಚಿಗೆ ಬೆಲೆ ಕೊಟ್ಟು ಕೊಂಡು ಕೊಳ್ಳತೊಡಗಿದರು. ಆ ವಿಧವಾಗಿ ತಮ್ಮ ಹತ್ತಿರ ಸೇರಿದ ಹಣದಿಂದ, ಏನು ಕೊಂಡು ಕೊಳ್ಳುವುದೆಂದು ತಿಳಿಯದ ಗ್ರಾಮಸ್ಥರಿಗೆ, ಹಣದ ಗಂಟು ನೋಡುವುದೇ ಒಂದು ಆನಂದವಾಯಿತು. ಬತ್ತ ಮೊದಲಾದ ಧಾನ್ಯಗಳಿಗೂ ತರಕಾರಿಗಳಿಗೂ ಇನ್ನಷ್ಟು ಬೆಲೆ ಹೆಚ್ಚಿಸಿ ಸ್ಪರ್ಧೆಗೆ ಬಿದ್ದು ಹಣ ಮಾಡ ತೊಡಗಿದರು.

ರಾಜ್ಯವು ಒಂದು ಬಗೆಯ ಅರಾಜಕ ಪರಿಸ್ಥಿತಿಯ ಅಂಚಿಗೆ ಹೋಯಿತು. ದೊಡ್ಡ ದೊಡ್ಡ ಮೊತ್ತಗಳನ್ನು ಕೊಟ್ಟು ಆಹಾರಧಾನ್ಯಗಳನ್ನು ಕೊಂಡುಕೊಳ್ಳಲಾಗದ ಪಟ್ಟಣವಾಸಿಗಳು ಗುಂಪು ಸೇರಿಕೊಂಡು, ರಾತ್ರಿಯ ಹೊತ್ತಿನಲ್ಲಿ ಬೇರೆಬೇರೆ ಗ್ರಾಮಗಳ ಮೇಲೆ ಬಿದ್ದು ದೋಚಿಕೊಳ್ಳಲು ತೊಡಗಿದರು. ಇದಕ್ಕೆ ಪ್ರತಿಯಾಗಿ ಗ್ರಾಮಗಳಲ್ಲಿರುವವರು ಬತ್ತದ ಚೀಲದಷ್ಟು ಬಂಗಾರವು ಬೇಕೆಂದು ನಿರ್ಣಯಿಸಲು ತೊಡಗಿದರು. ಅವರು ಕೂಡಾ ಗುಂಪು ಸೇರಿಕೊಂಡು ಕೈಗೆ ಸಿಕ್ಕಿದ ಆಯುಧಗಳಿಂದ ದೋಚಿಕೊಳ್ಳುವವರನ್ನು ಇದಿರಿಸಿ ಆತ್ಮರಕ್ಷಣೆ ಮಾಡಿಕೊಳ್ಳಬೇಕಾಯಿತು.

ಹೀಗೆಲ್ಲಾ ಹಾದಿಯಾರು ನಡೆಯುತ್ತಿರುವ ಸಮಾಚಾರ ಚಿತ್ರಸೇನ ಮಹಾರಾಜರಿಗೆ ಗೊತ್ತಾಗಲೇ ಇಲ್ಲ. ನಿಜ ಹೇಳಬೇಕಾದರೆ ಅವರೊಂದಿಗೆ ಜನಗೂ ಸಮರಸೇನನಿಗೆ ಕೂಡಾ ಅದಾವುದೂ ತಿಳಿಯದು. ನಾವು ಕೂಡಾ ದೇಶದ ಯಾವ ಮೂಲೆಯಲ್ಲಿ ಏನು ನಡೆಯುತ್ತಿದೆಯೆಂಬುದನ್ನು ತಿಳಿಯುವ ಗೋಜಿಗೆ ಹೋಗಲಿಲ್ಲ. ಧನಾಗಾರದಿಂದ ಪ್ರವಾಹದ ಹಾಗೆ ಹರಿಯುವ ಧನವನ್ನು ಉಪಯೋಗಿಸುವವರು ಬಹಳಮಂದಿ ಇದ್ದಾರೆ. ಸಂತೋಷದಿಂದಲೇ ಕೇಳ ದಷ್ಟು ಹಣ ಕೊಡಲಾಗುತಿತ್ತು. ಹೀಗಾಗಿ ಆಹಾರ ಪದಾರ್ಥಗಳ ಬೆಲೆ ಸಾವಿರ ಪಾಲು ಹೆಚ್ಚಾಗಿ ಎಷ್ಟುಧಿಕವಿದ್ದರೂ ಸಾಕೆನಿಸುತ್ತಿರಲಿಲ್ಲ.

ಇನ್ನು ರಾಜನ ವಿಷಯಕ್ಕೆ ಬಂದರೆ, ಚಿತ್ರಸೇನ ಮಹಾರಾಜರು ತಮ್ಮ ವಿನೋದಗಳಿಗಾಗಿ ಏರ್ಪಡಿಸಿದ ಆಟಗಳು ತುಂಬಾ ವಿಚಿತ್ರ ಮಾತ್ರವಲ್ಲ, ಬಲು





ಅಲ್ಪ ಸ್ವಲ್ಪ ನನಗೆ ತಿಳಿದು ಅದನ್ನು ನಾನು ಹೇಳಿದಾಗ, ನನ್ನ ಮಾತಿಗೆ ಯಾರೂ ಲಕ್ಷ್ಯಕೊಡಲಿಲ್ಲ. ಭಯಶೀಲನೆಂದು ನನಗೇ ಗೇಲಿ ಮಾಡಿದರು.

ದೇಶದೊಳಗಿನ ವರ್ತಕ ವ್ಯಾಪಾರಗಳೂ, ವ್ಯವಸಾಯವೂ ಪೂರ್ತಿ ಹಾಳಾದುವು. ಅನೇಕರು ಒಬ್ಬರನ್ನು ಕುರಿತು ಇನ್ನೊಬ್ಬರು ಬೈಯುವುದೂ, ಸಿಟ್ಟಿನಿಂದ ಕೆರಳುವುದೂ ಹೆಚ್ಚಾಯಿತು. ಯಾವುದಕ್ಕೂ ಹೇಸದ ಕೆಲವರು ಪ್ರತ್ಯೇಕ ಗುಂಪುಗಳಾಗಿ, ತಲೆಮರೆಸಿಕೊಂಡು ಕೊಳ್ಳೆಗಾರರಾಗಿ ಪಟ್ಟಣಗಳನ್ನೂ, ಗ್ರಾಮಗಳನ್ನೂ ದೋಚಿಕೊಳ್ಳತೊಡಗಿದರು. ದರೋಡೆ ಪ್ರಾರಂಭವಾದ ಮೇಲೆ ಬಹು ಬೇಗದಲ್ಲೇ ಚಿತ್ರಸೇನನ ಪರಿಪಾಲನೆ ಎಂಬುದು ರಾಜಭವನದ ಪ್ರಾಂಗಣದಲ್ಲಷ್ಟೇ ಪರಿಮಿತವಾಯಿತು. ದೇಶದಲ್ಲಿ ರಾಜನನ್ನು ಹೆದರುವವನೇ ಇಲ್ಲ. ನಾಯಿಕೊಡೆಗಳಂತೆ ದೇಶದಲ್ಲೆಲ್ಲಾ ರಾಜರೂ, ಮಹಾರಾಜರೂ, ಸಾಮ್ರಾಟರೂ ತಲೆಯೆತ್ತಿದರು.

ಒಂದು ದಿನ ಸಾಯಂಕಾಲ ಚಿತ್ರಸೇನ ರಾಜನಿಗೆ ಬಿಸಿ ಮುಟ್ಟುವ ಸಂಭವ ನಡೆಯಿತು. ಅವನು ವಿನೋದ ಪ್ರದರ್ಶನವನ್ನು ನೋಡುತ್ತ, ಆನಂದದಲ್ಲಿರುವ ಸಮಯದಲ್ಲಿ, ಯಾವನೋ ಒಬ್ಬ ದೂತನು ಬಂದು, ಒಂದು ಪತ್ರವನ್ನು ರಾಜನಿಗೆ ಕೊಟ್ಟನು. ರಾಜನು ಅಲಕ್ಷ್ಯವಾಗಿ, ಅದನ್ನು ನೋಡುವಂತೆ ಸಮರಸೇನನ ಕೈಗೆ ಕೊಟ್ಟನು. ಅದನ್ನು ಓದುತ್ತಿದ್ದಂತೆ ಸಮರಸೇನನ ಮುಖದ ಕಳೆ ಕಪ್ಪಾಗಿ ಕುಂದತೊಡಗಿತು. ಒಮ್ಮೆಗೇ ಅವನ ಮುಖದ ರಕ್ತವೆಲ್ಲಾ ಇಂಗಿ ಹೋಗಿ ಬಿಳಿಚಿಕೊಂಡಿತು.

ಅವನು ರಾಜನ ಕಿವಿಯಲ್ಲಿ ನಡುಗುವ ಸ್ವರದಿಂದ ಸಣ್ಣ ದನಿಯಲ್ಲಿ 'ಮಹಾರಾಜಾ, ತುಂಬಾ ಅವಸರದ ಅಗತ್ಯ ವಿಷಯವಿದೆ. ಈ ಪ್ರದರ್ಶನವನ್ನು ಇಲ್ಲಿಗೇ ನಿಲ್ಲಿಸಿ, ನಮ್ಮ ಭವನದ ಅಂತರಂಗದ ಮಂದಿರಕ್ಕೆ ಹೋಗಬೇಕು. ರಾಜ್ಯಾಂಗವನ್ನು ಕುರಿತು ಬಹು ಬೇಗನೇ ಆಲೋಚನೆ ಮಾಡಬೇಕಾಗಿದೆ!' ಎಂದನು.

'ಹಾಗೇನು ತಲೆಹೋಗುವ ಕಾರ್ಯ ಬಂತಯ್ಯಾ! ನೀನೇ ಹೋಗಿ ನಿವೃತ್ತಿಪಡಿಸಿಬಿಡು' ಎಂದನು ಚಿತ್ರಸೇನ ಆಟದ ಲವಲವಿಕೆಯಿಂದ ಕಾಲನ್ನು ಕೀಳಲಾಗದೆ.

'ಇಲ್ಲ ಪ್ರಭೂ. ನಡೆಯಿರಿ. ತಮಗೇ ಸಂಬಂಧಪಟ್ಟದ್ದು!' ಎಂದು ಸಮರಸೇನನು ಒತ್ತಾಯಿಸಲು ಇಷ್ಟವಿಲ್ಲದ ಮನಸ್ಸಿನಿಂದ ಚಿತ್ರಸೇನನು ಅಲ್ಲಿಂದ ಹೊರಟನು. ಆಗ ನಾನು ಅಲ್ಲಿಂದ ಹೊರಡಲು ನೋಡಿದೆ. ಸಮರಸೇನನು ನನ್ನನ್ನು ನಿಲ್ಲಿಸಿ, 'ಶಿವದತ್ತಾ, ಬಹುಮುಖ್ಯ ಕೆಲಸ. ನೀನು ನಮ್ಮ ಜೊತೆಗೇ ಇರಬೇಕು' ಎಂದನು.

ನಾವು ಮೂವರು ಮಹಾರಾಜನ ರಹಸ್ಯ ಮಂದಿರವನ್ನು ಸೇರಿದೆವು. ಸಮರಸೇನನು ದೂತ ತಂದುಕೊಟ್ಟ ಪತ್ರವನ್ನು ತೋರಿಸಿ, ಹೀಗೆಂದನು.

'ಇಷ್ಟು ಕಾಲದವರೆಗೆ ನಾವು ಕನಸ್ಸಿನಲ್ಲೂ ಇಲ್ಲದವರಂತೆ ಇದೆವು. ಈ ಕುಂತಲೀನ ದ್ವೀಪದಲ್ಲಿ ನಮಗೆ



ತಿಳಿಯದಂತೆಯೇ ಕೆಲವು ರಾಜರೂ ಮಹಾರಾಜರೂ, ಹುಟ್ಟಿಕೊಂಡಿದ್ದಾರೆ. ಅವರಲ್ಲಿ ಕೆಲವರು ಸೇರಿ ನಮಗೆ ಈ ಸಂದೇಶ ಕಳುಹಿಸಿದ್ದಾರೆ. ನಮ್ಮ ಮಹಾರಾಜರನ್ನು ಏಕ ವಚನದಲ್ಲಿ ಸಂಬೋಧಿಸಿ ಈ ಪತ್ರವನ್ನು ಅಕ್ಷಮ್ಯ ರೀತಿಯಲ್ಲಿ ಕಳಿಸಿದ್ದಾರೆ. ದುಷ್ಟನೂ ಅಸಮರ್ಥನೂ ಆದ ರಾಜನನ್ನು ಕೆಳಗಿಳಿಸಿಬಿಡುತ್ತಾರಂತೆ. ಒಳ್ಳೆಯ ಮಾತಿನಲ್ಲಿ ಸಿಂಹಾಸನವನ್ನು ಅವರ ವಶಕ್ಕೆ ಒಪ್ಪಿಸಿ ಬಿಡಬೇಕಂತೆ. ಅವರಿಗೆ ಶರಣಾಗತರಾಗುವುದೇ ಜೀವದಿಂದಿರುವ ಮಾರ್ಗವಂತೆ ನಮಗೆ! ಕೊನೆಯ ಸಂದೇಶವಂತೆ ಇದು.'

ಇಷ್ಟು ಕೇಳಿದ ಮೇಲೆ ಚಿತ್ರಸೇನ ಮಹಾರಾಜನಿಗೆ ಇಷ್ಟು ಕಾಲ ಹಿಡಿದುಕೊಂಡಿದ್ದ ನಿದ್ದೆಯು ಮತ್ತು ಬಿಟ್ಟು ಹೋಗಾಯಿತು. ಹಠಾತ್ತಾಗಿ ನಿದ್ದೆಯಿಂದೆದ್ದವನಂತೆ ಸಮರಸೇನನನ್ನು ದೊಡ್ಡ ಕಣ್ಣುಗಳಿಂದ ನೋಡಿದನು. ನೆಲವನ್ನು ಕಾಲಿನಿಂದ ಅಪ್ಪಳಿಸಿದನು. 'ಸಮರಸೇನಾ, ರಾಜ್ಯದ ಪರಿಸ್ಥಿತಿ ಸ್ವಲ್ಪ ಕೈಜಾರಿದ ಹಾಗೆಯೇ ಆಗಿದೆಯೆಂದಾಯಿತು. ಇದಕ್ಕೆಲ್ಲಾ ಕಾರಣ ನಮ್ಮ ಖಜಾನೆಯಿಂದ ಹರಿದ ಹಣದ ಪ್ರವಾಹ. ಇನ್ನು ಈ ಸೊಕ್ಕು ಹಿಡಿದವರ ಕುತಿಗೆಯನ್ನು ಹಿಸುಕದೆ ಸಾಧ್ಯವಿಲ್ಲ. ಉಳಿದವರಿಗೆ ತಕ್ಕ ಬುದ್ಧಿ ಬರುವ ಹಾಗೆ ಮುಖ್ಯ ನಾಯಕರನ್ನೆಲ್ಲಾ ಹಿಡಿದು ಚಿತ್ರವಧೆಮಾಡಬೇಕು. ಬೇಗನೆ ಆ ಕಾರ್ಯ ಮಾಡಿ ಒಳ್ಳೆಯ ಸಮಾಚಾರ ಬರುವಂತೆ ನೀವಿಬ್ಬರೂ ಮಾಡಿರಿ. ಈಗಲೇ ಹೊರಡಿರಿ!'

'ಸರಿ ಮಹಾರಾಜರೆ. ಮತ್ತೆ ಬಂದು ನೋಡುತ್ತೇವೆ' ಎಂದು ಸಮರಸೇನನು ರಹಸ್ಯ ಮಂದಿರದಿಂದ ಹೊರಟನು. ನಾನೂ ಅವನೊಂದಿಗೇ ಇದ್ದೆ. ನಮ್ಮಿಬ್ಬರ ಬಾಯಿಯಿಂದಲೂ ಸ್ವಲ್ಪ ಹೊತ್ತು ಯಾವ ಮಾತೂ ಹೊರಡಲಿಲ್ಲ. ಸಮರಸೇನನು ಒಂದು ಕಡೆಯಲ್ಲಿ ಥಟ್ಟನೆ ನಿಂತು, 'ಶಿವದತ್ತಾ, ಇದನ್ನು ಕುರಿತು ನಿನ್ನ ಅಭಿಪ್ರಾಯವೇನು?' ಎಂದು ಕೇಳಿದನು. ನಾನು ಇದಿರು ನೋಡದ ರೀತಿಯಲ್ಲಿ ಅವನು ಪ್ರಶ್ನಿಸಿದುದನ್ನು ನೋಡಿ ಏನು ಹೇಳಬೇಕೋ ಗೊತ್ತಾಗಲಿಲ್ಲ. ನನಗೆ ಅಲ್ಪ ಸ್ವಲ್ಪ ತಿಳಿದಿರುವಂತೆ, ದೇಶವು ಅರಾಜಕವಾಗಿರುವುದನ್ನೂ, ಬಾಯಿ ಮಲ್ಲರಾದವರು ಪ್ರಜೆಗಳನ್ನು ಒಂದುಗೂಡಿಸಿ ಅವರವರೊಳಗೆ ಹೋರಾಡುವುದನ್ನೂ ನಾನು ಅರಿತಿದ್ದೆನು. ಅಂಥವರು ಹೀಗೆ ಮಹಾರಾಜನನ್ನೇ ಇದಿರಿಸುವಷ್ಟು ಬಲಿಷ್ಠರಾಗುವರೆಂದು ನಾನು ಊಹಿಸಿರಲಿಲ್ಲ. ಆದುದರಿಂದ ನನಗೂ ಆಶ್ಚರ್ಯವೇ. ಆದರೆ ಒಂದು: ಸಮರಸೇನನಿಗೆ ನನಗೆ ತಿಳಿದಷ್ಟು ಕೂಡಾ ದೇಶ ಪರಿಸ್ಥಿತಿ ತಿಳಿಯದೆಂದು ಈಗ ಗೊತ್ತಾಯಿತು.

'ಶತ್ರುಗಳು ಬಲಶಾಲಿಗಳೆಂದೇ ನನಗೆ ಕಾಣುತ್ತದೆ. ಹಾಗಿಲ್ಲದಿದ್ದರೆ ಅವರು ಹೀಗೆ ಮಹಾರಾಜನಿಗೆ ಎಚ್ಚರ ಬಿಡುತ್ತಿರಲಿಲ್ಲ. ಮುಂದಾಗಿ ರಾಜನಿಗೆ ತಿಳಿಸಿ, ದಾಳಿ ತೆಗೆಯುತ್ತಾರೆಂದರೆ, ರಾಜನು ಯುದ್ಧ ಸನ್ನದ್ಧ




೫

[ಮಂದರದೇವನು ಶಿವದತ್ತನ ಪರಿಚಯಮಾಡಿಕೊಂಡು, ಕುಂಡಲಿನೀದ್ವೀಪರಾಜ್ಯದ ವಿವರಗಳನ್ನು ತಿಳಿಯುತ್ತಿದ್ದನು. ಆ ರಾಜ್ಯಕ್ಕೆ ಅಪರಿಮಿತವಾಗಿ ಧನದ ರಾಶಿಯನ್ನೇ ತಂದು ಹಾಕಿದುದರಿಂದಲೇ ವಿಪರೀತವಾಯಿತೆಂದೂ ರಾಜನು ವಿನೋದ ಕಾಲಕ್ಷೇಪದಲ್ಲಿದ್ದುದರಿಂದ ದೇಶವು ಅರಾಜಕವಾಗಿ, ಶತ್ರುಗಳು ಮುತ್ತುವಾಗ ಸೇನಾನಾಯಕತ್ವವು ನರವಾಹನಮಿಶ್ರನಿಗೆ ಸಿಗುವಂತಾಯಿತೆಂದೂ ಹೇಳುತ್ತಿದ್ದನು.]

ಶಿವದತ್ತನು ಹೇಳುವ ಸಂಗತಿಗಳನ್ನು ಶ್ರದ್ಧೆಯಿಂದಲೂ, ಆಸಕ್ತಿಯಿಂದಲೂ ಕೇಳುತ್ತಲಿದ್ದ ಮಂದರದೇವನಿಗೆ, ಕೇಳುತ್ತಿದ್ದಂತೆ ಕ್ಷಣ ಕ್ಷಣಕ್ಕೂ ಆಶ್ಚರ್ಯವು ಅಧಿಕವಾಗುತ್ತಿತ್ತು. ಸಂಭಾಷಣೆಯ ಗುಂಗಿನಲ್ಲಿ ತಮ್ಮ ದೋಣಿಗಳು ಯಾವ ಕಡೆಗೆ ಹೋಗುತ್ತಿರುವುದೆಂದೂ ಅವನಿಗೆ ಗೊತ್ತಾಗಲಿಲ್ಲ. ಅವನು ಅತ್ಯಾತುರದಿಂದ ಶಿವದತ್ತನ ಮಾತಿಗೆ ಅಡ್ಡ ಬಂದು, "ಅಲ್ಲ ಶಿವದತ್ತರೇ, ಸೇನಾನಾಯಕತ್ವವು ದುಷ್ಟನಾದ ನರವಾಹನ ಮಿಶ್ರನಿಗೆ ಸಿಗದಂತೆ ಮಾಡಲು ನಿಮಗಾರಿಗೂ ಸಾಧ್ಯವಾಗದೆ ಹೋಯಿತೇ ? ಸ್ವತಃ ನೀವೇ ಸೇನಾನಾಯಕತ್ವವನ್ನು ವಹಿಸಿಕೊಳ್ಳುತ್ತಿದ್ದರೆ ಸರಿಯಾಗಿ ಬಿಡುತಿತ್ತಷ್ಟೆ ?" ಎಂದು ಕೇಳಿದನು.

ಮಂದರದೇವನ ಮಾತು ಕೇಳಿ ಶಿವದತ್ತನು ನಕ್ಕು, "ಆ ದಿನಗಳ ಪರಿಸ್ಥಿತಿಯಲ್ಲಿ ಅದು ಅಷ್ಟು ಸುಲಭಸಾಧ್ಯವಾಗಿರಲಿಲ್ಲ. ನಾನಾಗಿ ಬಾಯಿ ತೆರೆದು ನನಗೆ ಸೇನಾನಾಯಕತ್ವ ಕೊಡಬೇಕೆಂದು ಕೇಳುವುದು ಸರಿಯಾಗಿರದಷ್ಟೆ ? ಅದು ಏನೇನೋ ಅಪಾರ್ಥಗಳಿಗೆ ದಾರಿಯಾಗಬಹುದು. ಹಾಗೆಂದು ಸುಮ್ಮನಿರುವುದರಿಂದ ಸೇನಾನಾಯಕತ್ವವು ದುಷ್ಟನೊಬ್ಬನಿಗೆ

ಸಿಗಲು ಬಿಡುವುದೂ ಶ್ರೇಯಸ್ಕರವಲ್ಲವೆಂಬುದೂ ತಿಳಿದಿರುವ ನಿಜವೇ. ಆದಕ್ಕೆ ಮಾರ್ಗಾಂತರವೇನೆಂದು ನಾನು ತೀವ್ರವಾಗಿ ಆಲೋಚಿಸಲು ತೊಡಗಿದೆನು. ನನ್ನ ಆಲೋಚನೆಯನ್ನು ಕಂಡುಹಿಡಿದು ಸಮರ ಸೇನನು, 'ಏನು ಆಲೋಚನೆ ಮಾಡುವ ಹಾಗಿದೆಯಲ್ಲಾ ಶಿವಪಾತ್ರಾ? ಸಂಕೋಚಪಡದೆ ನನಗೂ ಸ್ವಲ್ಪ ಹೇಳು' ಎಂದನು.

ಅವನಾಗಿ ಕೇಳಿದ್ದು ಒಳ್ಳೇದೆನಿಸಿ ನಾನು ಅವನೊಡನೆ ಹೀಗೆ ಹೇಳಿದೆ: 'ಸಮರಸೇನಾ, ಈಗಿನ ಪರಿಸ್ಥಿತಿಯಲ್ಲಿ ನೀನೇ ಸೇನೆಗಳಿಗೆಲ್ಲಾ ನಾಯಕನಾಗಬೇಕಾದುದು ಒಳ್ಳೆಯದೆಂದು ನನ್ನ ಆಲೋಚನೆ. ಶತ್ರುಗಳು ಕಳುಹಿಸಿದ ಎಚ್ಚರಿಕೆಯ ಸಂದೇಶವನ್ನು ಹಿಡಿದು ನೋಡುವಾಗ, ಅವರ ಬಲದಲ್ಲಿ ಅವರಿಗಿರುವ ದೃಢನಂಬುಗೆ ವ್ಯಕ್ತವಾಗುತ್ತದೆ. ಆದುದರಿಂದ ಸುಲಭದಲ್ಲಿ ಹೊಡೆದು ಹಾಕುವ ವಿಷಯವಲ್ಲ ಇದು. ದುರದೃಷ್ಟವಶಾತ್ತಾಗಿ ನಮ್ಮ ಸೈನ್ಯವು ಶತ್ರುಗಳಿಂದ ಚಿಕ್ಕ ಪೆಟ್ಟನ್ನು ತಿಂದರೂ, ಅದು ಬೇರೆ ಕೆಲವು ಶತ್ರುಗಳು ನಮ್ಮ ಮೇಲೆ ಧ್ವಜ ಎತ್ತಲು ಉತ್ಸಾಹಬರುವಂತಾಗುತ್ತದೆ. ನಮ್ಮ ಸೈನ್ಯಗಳ ಬಲಕ್ಕೂ ವಿಸ್ಮೃತಿಯುಂಟಾಗುತ್ತದೆ. ಆದುದರಿಂದ ಇದನ್ನೆಲ್ಲ ಮನದಂದು ನೋಡುವಾಗ, ಕಷ್ಟವನ್ನು ತಡೆದು ಹಿಂದೂಡ ಬೇಕಾಗಿದೆ. ನೀನೇ ಸೇನಾನಾಯಕನಾಗುವುದು ಒಳ್ಳೆಯದು'.

ನನ್ನ ಮಾತು ಸಮರಸೇನನಿಗೆ ಒಪ್ಪಿಗೆಯಾಯಿತು. 'ಹೌದು. ನಿಜವೇ. ಹಾಗೆಯೇ ಮಾಡುತ್ತೇನೆ.' ಎಂದು ತಲೆಯಾಡಿಸಿದನು ಗಂಭೀರವಾಗಿ.

ಅಷ್ಟರಲ್ಲಿ ಆ ಸ್ಥಳಕ್ಕೆ ನರವಾಹನ ಮಿಶ್ರನು ಬಂದನು. ಅವನನ್ನು ನೋಡಿದ ಕೂಡಲೇ ಸಮರ ಸೇನನು, 'ನೆನೆಯುವಾಗಲೇ ಬಂದೆ ನರವಾಹನಾ! ನಿನಗಾಗಿ ಹೇಳಿ ಕಳುಹಿಸಬೇಕೆಂದಿದ್ದೆ. ನೀನೀಗ ಕೂಡಲೇ ಹೋಗಿ ಸೇನೆಗಳನ್ನೆಲ್ಲ ಒಟ್ಟು ಕೂಡಿಸಬೇಕು. ಒಂದು ಗಂಟೆ ಅವಧಿಯೊಳಗೆ ಎರಡು ಸಾವಿರಮಂದಿ ಸೈನಿಕರು ಸಮಾವೇಶವಾಗುವಂತೆ ಮಾಡಬೇಕು. ಸೂರ್ಯನು ಮುಳುಗುವುದರೊಳಗೆ






ದೊಂದೂ ಬಟ್ಟೆದೋಣಿ ಉಳಿದ ಹಡಗುಗಳನ್ನು ಬಿಟ್ಟು ನೇರಾಗಿ ತೀರದ ಕಡೆಗೆ ತಿರುಗಿ ತಿರುಗಿ ಗಂಡಚಕ್ರ ದೊಳಗಿನಿಂದ ಪಾರಾಗಿ ಬರತೊಡಗಿತು.

ಶಿವದತ್ತನೂ ಮಂದರದೇವನೂ ಅದನ್ನು ನೋಡಿ ಆಶ್ಚರ್ಯಚಕಿತರಾದರು. ಆ ಚಿಕ್ಕ ಬಟ್ಟೆತರಿ ತೀರದ ಕಡೆಗೆ ಓಡುವುದನ್ನು ಹಡಗಿನಲ್ಲಿ ಹೋರಾಡು ವವರಾರೂ ಗಮನಿಸಿದಂತೆ ಕಾಣಲಿಲ್ಲ. ಅವರು ತಮ್ಮೊಳಗೆ ಕೂಗುತ್ತ ಚೀರುತ್ತ ಹಡಗಿನಿಂದ ಹಡಗಿಗೆ ಹಾರುತ್ತ ಒಬ್ಬರನ್ನೊಬ್ಬರು ಕೊಲ್ಲುವುದ ರಲ್ಲೇ ಕಣ್ಣಾಗಿದ್ದರು. ತಪ್ಪಿಸಿಕೊಂಡು ಹೋಗುವವರು ಅದೃಷ್ಟಶಾಲಿಗಳಂತೆ ಕಾಣುತ್ತಿದ್ದರು.

ಸ್ವಲ್ಪಹೊತ್ತು ಕಳೆಯುವಷ್ಟರಲ್ಲಿ ಸಮುದ್ರಕೇತು ಓಡಿಹೋಗುವ ತರಿಯನ್ನು ಗಮನಿಸಿ, "ಓ ಹೋಯ್ !" ಎಂದು ಗಟ್ಟಿಯಾಗಿ ಕೂಗಿ, "ಅದೋ ! ಅವರು ಓಡಿ ಹೋಗುತ್ತಿದ್ದಾರೆ. ಈಜುತ್ತಾ ಓಡಿಹೋಗಿ ಆ ಬುಟ್ಟಿ ದೋಣಿಯನ್ನು ಹಿಡೀರಿ, ಹಿಡೀರಿ ! ನಮ್ಮ ಮುಖ್ಯ ಗುರಿ ಅದರಲ್ಲೇ ಇದೆ !" ಎಂದು ಕೂಗಿದನು.

ಕೂಡಲೇ ಕಡಲು ಗಳ್ಳರ ಗುಂಪಿನ ಕೆಲವರು ಸಮುದ್ರಕ್ಕೆ ಹಾರಿ, ಗುಂಡಗಿನ ತರಿಯ ಕಡೆಗೆ ವೇಗವಾಗಿ ಸಾಗತೊಡಗಿದರು. ಅವರ ಹಿಂದೆ ಮತ್ತೆ ಕೆಲವರು ಹಾರಿ, ಈಜಿಕೊಂಡು ಹೋಗುವ ಕಳ್ಳರನ್ನು ತಮ್ಮ ಕತ್ತಿಯಿಂದ ಹೊಡೆಯುತ್ತ ತಡೆಯತೊಡಗಿದರು. ಆದುದರಿಂದ ಬಟ್ಟೆತರಿ ನಿರಾತಂಕವಾಗಿ ತೀರದ ಕಡೆಗೆ ಬರುತ್ತಲೇ ಇದ್ದಿತು.

ಅದನ್ನು ಅಟ್ಟಿಸಿಕೊಂಡು ಈಜುಬಿದ್ದ ಪಕ್ಷ ಪ್ರತಿಪಕ್ಷಗಳೊಳಗೆ ಸಮುದ್ರ ಜಲದಲ್ಲೇ ಹೋರಾಟ ನಡೆಯ ತೊಡಗಿದರು.

"ಅರರೆ ! ಎಂತಹ ವಿಚಿತ್ರ ಯುದ್ಧವನ್ನು ನಾವು ನೋಡುತ್ತಿದ್ದೇವೆ ! ನೀರಿನಲ್ಲಿಯೇ ತೇಲಾಡಿಸುವ ಸೋಲುಗೆಲುವುಗಳ ಯುದ್ಧವನ್ನು ನಾನಂತೂ ಈವರೆಗೂ ನೋಡಿಲ್ಲ ! ಇವರಿಗೆ ನೆಲವೂ ಜಲವೂ ಒಂದೇಯಾಗಿದೆ! ಎಂತಹ ಅದ್ಭುತ ಯುದ್ಧವಿದು!" ಎಂದನು ಮಂದರದೇವ.

ಶಿವದತ್ತನು ನಿಜವೆಂಬಂತೆ ತಲೆಯಾಡಿಸಿದನು. ಅವನು ಹೋರಾಡಿಕೊಂಡಿರುವ ಹಡಗುಗಳ ಕಡೆಗೂ, ತೀರವನ್ನು ಸಮೀಪಿಸುತ್ತಿರುವ ಬಟ್ಟೆ ತರಿಯ ಕಡೆಗೂ ನೋಡಿಕೊಂಡಿದ್ದನು. ಅವೆರಡರ ನಡುವೆ ಸಮುದ್ರ ಜಲದಲ್ಲಿ ಈಜುಗಾರರ ಭಯಂಕರ ಸಮರ! ನೋಡ ನೋಡುತ್ತಿದ್ದಂತೆ ಎರಡು ಪಕ್ಷದವರ ಸಂಖ್ಯೆ ಕಡಿಮೆಯಾಗುತ್ತಲೂ ಇದ್ದಿತು.

ಕ್ರಮವಾಗಿ ಗುಂಡಗಿನ ತರಿ ತೀರವನ್ನು ಸಮೀಪಿ ಸಿತು. ತೀರವು ಐದಾರು ಗಜ ದೂರದಲ್ಲಿರುವಾಗಲೇ ಅದರೊಳಗಿದ್ದ ಇಬ್ಬರು ಸ್ತ್ರೀಯರು ನೀರಿಗೆ ಹಾರಿ ಬಿದ್ದೆದ್ದು ಈಜಿ ಒದ್ದಾಡುತ್ತಾ ಅವಸರವಸರವಾಗಿ ಹೇಗೋ ತೀರವನ್ನು ತಲಪಿದರು. ಹಿಂದೆಯೇ ಸಮುದ್ರದಲ್ಲಿ ಸಮುದ್ರಕೇತನ ಭೀಕರ ಗರ್ಜನೆ !



ಆದರ ಹಿಂದೆ ಎರಡು ಹಡಗುಗಳು ತೀರದಕಡೆ ಭರದಿಂದ ಬರತೊಡಗಿದುವು. ಮುಳುಗಿ ಹೋಗುತ್ತಿರುವ ಎರಡು ದೊಡ್ಡ ಹಡಗುಗಳಿಂದ ಹೃದಯ ವಿದಾರಕವಾದ ಆರ್ತನಾದ ಬೇರೆ! ಆದರ ಕಡೆಗೆ ಯಾರ ಲಕ್ಷ್ಯವೂ ಇಲ್ಲ!

"ಮಂದರದೇವ ಪ್ರಭೂ! ಇನ್ನು ನಾವು ಹೊರ ಬೀಳಲೇಬೇಕು." ಎಂದನು ಶಿವದತ್ತ. "ಅಲ್ಲಿ ತಪ್ಪಿಸಿಕೊಂಡು ಓಡಿಹೋಗುತ್ತಿರುವ ಸ್ತ್ರೀಯರು ಯಾರು ಏನೆಂಬ ವಿಚಾರ ಅಪ್ರಸ್ತುತ. ನಾವೀಗ ಆ ಸಮುದ್ರಕೇತನನ್ನು ತಡೆಯದೆ ಹೋದರೆ, ಅವರಿಬ್ಬರೂ ಅವನ ಕೈಗೆ ಸಿಕ್ಕಿ ಬೀಳುವುದು ಖಂಡಿತ. ಅವನು ತೀರಕ್ಕೂ ಓಡಿ ಬಂದು ಆ ಸ್ತ್ರೀಯರನ್ನು ಎಳೆದೊಯ್ಯುವ ಹಾಗೇ ಇದೆ" ಎಂದನು ಪುನಃ ಶಿವದತ್ತ.

ಮಂದರದೇವನು ಹಿಂದಿರುಗಿ ನೋಡಿದನು. ಅವನಿಗೆ ಮೂವರು ಸೈನಿಕರೂ, ವಜ್ರಮುಷ್ಟಿಯೂ ಕಾಣಿಸಿದರು. "ಉಳಿದಿಬ್ಬರು ನಮ್ಮವರು ಕಾಣುವು ದಿಲ್ಲವೇಕೆ? ಎಲ್ಲಿಗೆ ಹೋದರು?" ಎಂದು ಒಬ್ಬ ಸೈನಿಕನನ್ನು ಕೇಳಿದನು ಮಂದರದೇವ.

"ಅಯ್ಯಾ, ಅವರಿಬ್ಬರೂ ನಮ್ಮ ಭೋಜನ ಪದಾರ್ಥಗಳನ್ನು ನೋಡಿಕೊಳ್ಳುತ್ತ ಅಲ್ಲೇ ಇದ್ದಾರೆ" ಎಂದನು ಆ ಸೈನಿಕ.

"ಓಡಿಹೋಗಿ ಅವರನ್ನೂ ಕರೆದುಕೊಂಡು ಬಾ!" ಎಂದು ಮಂದರದೇವನು ಆ ಸೈನಿಕನಿಗೆ ಆಜ್ಞೆ ಮಾಡಿದನು.

ಸೈನಿಕನು ಹೊರಡಲುಜ್ಜುಗಿಸಿದಾಗ ಶಿವದತ್ತನು ಅವನನ್ನು ತಡೆದು, "ಅಯ್ಯಾ, ಮಂದರದೇವ ಪ್ರಭೂ, ನಾವೆಲ್ಲಾ ಕೂಡಿದರೂ ಎಂಟು ಮಂದಿಗಿಂತ ಹೆಚ್ಚಾಗಲಾರೆವು. ಸಮುದ್ರಕೇತನ ಗುಂಪಿನಲ್ಲಿ ಐವತ್ತು, ಅರುವತ್ತಕ್ಕಿಂತಲೂ ಹೆಚ್ಚೇ ಹುಚ್ಚು ಹಿಡಿದಂತಹ ವೀರರಿದ್ದಾರೆ. ನಾವು ಅವರನ್ನು ಇದಿರಿದಿರಾಗಿ ಕೆಣಕುವುದು ವಿಪರೀತಕ್ಕೇ ಒಯ್ಯುತ್ತದೆ. ಆದಕ್ಕೆ ಒಂದು ಉಪಾಯ ಮಾಡುವುದು ಒಳ್ಳೆಯದು" ಎಂದನು ಶಿವದತ್ತ.

ಮಂದರದೇವನು ಕಣ್ಣು ಸಂಜ್ಞೆಯಿಂದ ಅದೇನೆಂದು ಕೇಳಿದನು.

"ನಾವು ಇಷ್ಟು ಕಡಿಮೆ ಸಂಖ್ಯೆಯಲ್ಲಿರುವವರೆಂಬುದು ಸಮುದ್ರಕೇತನಿಗೆ ತಿಳಿಯಲೇ ಬಾರದು. ಅದು ತಿಳಿದುಬಿಟ್ಟರೆ ಬಹಳ ಅಪಾಯವಿದೆ. ನಾವು ಐವರು ಮರಗಳ ಮರೆಯಲ್ಲಿದ್ದು. ಒಂದೇ ಬಾಯಿಗೆ ಸಾವಿರಾರು ಕಂಠಗಳು ಹೊರಡುವಂತೆ, ಬೇರೆ ಬೇರೆ ಸ್ವರಗಳಿಂದ ಕೂಗಿಕೊಂಡು ಅವರ ಮೇಲೆ ಧುಮುಕಬೇಕು. ಉಳಿದ ನಮ್ಮ ಮೂವರು, ಹಾಗೆಯೇ ಕೂಗಿಕೊಂಡು ಕಳ್ಳರ ಹಿಂದಿನ ಬದಿಯಲ್ಲಿ ಅರಚಬೇಕು. ಹಿಂದೆ ಇರುವ ಮೂವರೂ ನಮ್ಮ ಹಾಗೇ ಕಿರುಚಿ ಅವರ ಮೇಲೆ ಬೀಳಬೇಕು" ಎಂದನು ಶಿವದತ್ತ. ಈ ಉಪಾಯಕ್ಕೆ ಮಂದರದೇವನು ಒಪ್ಪಿದನು.

ಊಟದ ಪದಾರ್ಥ ನೋಡಿಕೊಳ್ಳುತ್ತಿದ್ದವರಿಗೂ ಈ ಸಂಗತಿಯನ್ನು ಹೇಳಿ. ಅವರೊಂದಿಗೆ ಕಳ್ಳರ ಗುಂಪಿನ ಹಿಂದಿನ ಬದಿಯಲ್ಲಿ ಬಂದು ಬೀಳ ಬೇಕೆಂದು ಆ ಸೈನಿಕರಿಗೆ ಆಜ್ಞಾಪಿಸಲಾಯಿತು. ಈ ಉಪಾಯದಂತೆ ಅವರೆಲ್ಲ ತಕ್ಕ ಜಾಗದಲ್ಲಿ ಅಡಗಿ ಕುಳಿತು ಹೊಂಚ ತೊಡಗಿದರು.

ಕ್ರಮವಾಗಿ ಸಮುದ್ರಕೇತನ ಹಡಗುಗಳೆರಡೂ ತೀರದ ಹತ್ತಿರ ಬಂದುವು. ಸಮುದ್ರದಲ್ಲಿ ನಡೆಯು ತ್ತಿದ್ದ ಹೋರಾಟವು ಸಪ್ಪಗಾಯಿತು. ಎರಡು ಹಡಗುಗಳು ಮುಳುಗಿಹೋದುದರಿಂದ, ಉಳಿದ ಎರಡು ಹಡಗುಗಳನ್ನೂ ಸಮುದ್ರಕೇತನ ಕಡೆ ಯವರು ವಶಪಡಿಸಿಕೊಂಡು. ಅವರೂ ತೀರದ ಕಡೆಗೆ ಹೊರಟರು.

ಅವರಿಗೆ ದಾರಿಯಲ್ಲಿ ನೀರಿನ ಮೇಲೆ ಹೋರಾಡು ವವರು ಕಾಣುತ್ತಲೇ, ತಮ್ಮ ಕಡೆಯವರನ್ನು ಹಡಗಿನೊಳಗೆ ಎಳೆಯುತ್ತ, ಶತ್ರುಗಳೆನಿಸಿದವರನ್ನು ಕತ್ತಿಯಿಂದ ಕಡಿದು ಚೆಲ್ಲುತ್ತಾ ಅವರು ಬರುತ್ತಿದ್ದರು.

ಶಿವದತ್ತನು ಆ ಭಯಂಕರ ದೃಶ್ಯಗಳನ್ನೆಲ್ಲ ಒಂದುಸಾರಿ ನೋಡಿ. "ಮಂದರದೇವ ಪ್ರಭೂ! ಆ ಸಮುದ್ರಚೋರರು ಇದಿರಾಳಿಗಳೆಲ್ಲರನ್ನೂ ನಿರ್ದಯದಿಂದ ಕೊಲ್ಲುತ್ತಿದ್ದಾರೆ. ಇನ್ನು ಆ ಸ್ತ್ರೀಯರ ರಕ್ಷಣೆಯ ಭಾರವನ್ನು ನಾವು ನೋಡಿಕೊಳ್ಳ ಬೇಕಾದ್ದೇ ಸರಿ. ಅವರು ಓಡಿದ ದಿಕ್ಕಿಗೆ ಇವರಾರೂ ಹೋಗದಂತೆ ತಡೆಯುವುದು ಬಹು ಮುಖ್ಯ" ಎಂದನು. ಮಂದರದೇವನು ಆ ಭಯಂಕರ ದೃಶ್ಯವನ್ನು ಒಂದುಸಾರಿ ನೋಡಿ ತಲೆಯಾಡಿಸಿ: "ಸರಿ. ನಾವು ನಮ್ಮ ಕೆಲಸ ನೋಡುವ!" ಎಂದು ಪಕ್ಕದಲ್ಲಿರುವ ವಜ್ರಮುಷ್ಟಿಯನ್ನು ನೋಡಿ. "ಅರರೆ! ವಜ್ರ ಮುಷ್ಟಿ ನಿರಾಯುಧನಾಗಿದ್ದಾನೆ. ಅವನಿಗೊಂದು ಕತ್ತಿ ಕೊಡಬೇಕಲ್ಲ! ಏನು ಮಾಡೋಣ" ಎಂದು ಅತ್ತಿತ್ತ ನೋಡಿದನು.



ಅದನ್ನು ನೋಡಿ ವಜ್ರಮುಷ್ಟಿ ನಕ್ಕು, "ಅಯ್ಯಾ, ಆ ಚಿಂತೆ ಬಿಡಿ. ನನಗೆ ಬೇಕಾದ ಕತ್ತಿ ಯನ್ನು ನಾನೇ ಸಂಪಾದಿಸುತ್ತೇನೆ. ಆ ಸಮುದ್ರಕೇತ ನನ್ನು ನನ್ನ ಕೈಯಿಂದಲೇ ಕೊಲ್ಲಬೇಕೆಂದು ಬಹು ದಿನಗಳ ಆಶೆ. ಈದಿನ ಕಣ್ಣಿಗೆ ಬಿದ್ದಿದ್ದಾನೆ. ಕತ್ತಿ ಸಿಗುವ ವರೆಗೆ ನನ್ನ ಮುಷ್ಟಿಗಳೂ ಉಗುರುಗಳೂ ಸಾಕು" ಎಂದನು.

ಎಲ್ಲರೂ ಅಲ್ಲಿಂದ ಹೊರಟರು. ವಜ್ರಮುಷ್ಟಿಗೆ ಆ ಪ್ರಾಂತವೆಲ್ಲಾ ಚೆನ್ನಾಗಿ ಗೊತ್ತಿತ್ತು. ಆದುದರಿಂದ ಅವನೇ ಮುಂದೆ ಹೋಗುತ್ತಿದ್ದನು. ತೀರವನ್ನು ಸೇರಿದ ಸ್ತ್ರೀಯರಿಬ್ಬರೂ ಒಂದುಸಾರಿ ಸಮುದ್ರದ ಕಡೆಗೆ ಹಿಂದಿರುಗಿ ಇನ್ನೂ ತಮ್ಮ ಬೆನ್ನು ಹಿಡಿದ ಸಮುದ್ರಕೇತನನ್ನು ನೋಡಿ ಭಯಕಂಪಿತರಾಗಿ, ಮರಗಳ ಗುಂಪಿನ ಕಡೆಗೆ ಬೇಗಬೇಗನೆ ಓಡಿದರು.

ಅಷ್ಟರಲ್ಲಿ ಸಮುದ್ರಕೇತನ ಹಡಗುಗಳೆರಡೂ ತೀರದಲ್ಲಿ ಲಂಗರು ಹಾಕುವುದೂ. ಸಮುದ್ರಕೇತನು

ಕತ್ತಿಯನ್ನು ಝಳಪಿಸಿಕೊಂಡು "ಜೈ ಕಾಲಕೇಯಾ" ಎಂದು ಕೂಗಿ ನೀರಿಗೆ ಹಾರಿ, ಹಿಂದಿರುಗಿ ತನ್ನ ಅನುಚರರನ್ನು ನೋಡಿ, "ಸ್ವಯಂಪ್ರಭೆಗೆ ಮಾತ್ರ ಒಂದು ಕೂದಲೂ ಕೊಂಕಬಾರದು. ಆ ಮುದುಕಿಯನ್ನು ಮಾತ್ರ ಕತ್ತಿಗೆ ಬಲಿಕೊಟ್ಟು ಬಿಡಿ! ಅವರು ಯಾವ ಕಡೆಗೆ ಓಡಿದರೆಂದು ಗಮನಿಸಿದಿರಷ್ಟೆ ?" ಎಂದು ಕೂಗಿ ಆಜ್ಞೆಮಾಡಿದನು.

ಅವರೆಲ್ಲ ಇನ್ನೂ ನೀರಿನಲ್ಲೇ ತೀರದ ಕಡೆಗೆ ಬರುತ್ತಿದ್ದುದರಿಂದ, ಸ ಮು ದ್ರ ಕೇ ತ ನ ಮಾತಿಗೆ "ಹೋಹೋ" ಎಂದು ಕೂಗಿ ನೋಡಿದ್ದೇವೆಂಬಂತೆ ಸೂಚಿಸಿದರು. ಎಲ್ಲರೂ ಬಹಳ ಶ್ರಮಿಸಿ ತೇಕುತ್ತಿದ್ದರು.

ಹಾಗೆ ಈಜಿಯೂ ನಡೆದೂ ಬಂದು ಸಮುದ್ರಕೇತು ತೀರ ಸೇರಿದನು. ಅವನ ಹಿಂದೆ ಇಪ್ಪತ್ತು ಮಂದಿ ಕಡಲ್ಗಳ್ಳರೂ ತೀರವನ್ನು ತಲಪಿದರು. ಎಲ್ಲರೂ ಆ ಸ್ತ್ರೀಯರು ಓಡಿಹೋದ ಮರಗಳ ಗುಂಪಿನ ಕಡೆಗೆ ಸದ್ದುಮಾಡದೆ ಓಡಿದರು.

"ತ್ವರೆಮಾಡಿ! ಅವರು ಮರಗಳ ಗುಂಪಿನೊಳಗೆ ಹೋಗುವುದಕ್ಕೆ ಮೊದಲೇ ನಾವು ತಡೆಯಬೇಕು. ಎಲ್ಲರೂ ಒಂದೇ ಬಾರಿಗೆ ಕೂಗಿ ಅವರ ಮೇಲೆ ಹಾರೋಣ. ವಿಜಯವೋ ವೀರಸ್ವರ್ಗವೋ! ಎಂದನು ಶಿವದತ್ತ.

"ಮರಾಳದೇವಿಯ ಕರುಣೆ!" ಎಂದು ಮಂದರದೇವನು ಕತ್ತಿಯನ್ನು ಮೇಲೆತ್ತಿ ನಮಸ್ಕಾರ ಮಾಡಿದನು.

ಶಿವದತ್ತಾದಿಗಳೆಲ್ಲರೂ ಮರಗಳ ಗುಂಪಿನೊಳಗೆ ನುಸುಳಿ, ಬಿಚ್ಚುಗತ್ತಿಗಳೊಂದಿಗೆ ಅಲ್ಲೆಲ್ಲಾದರೂ ಆ ಸ್ತ್ರೀಯರಿದ್ದಾರೋ ಎಂದು ನೋಡಿದರು. ಅವರ ಸುಳಿವು ಕಾಣಲೇ ಇಲ್ಲ. "ಆ ಸ್ತ್ರೀಯರು ಇನ್ನೂ ಒಳಭಾಗಕ್ಕೆ ಹೋಗಿರಬಹುದು" ಎಂದನು ಮಂದರದೇವ.

ಶಿವದತ್ತನು ತಲೆಯಾಡಿಸಿ, "ಒಂದುಸಾರಿ ಆ ಸಮುದ್ರ ಕಳ್ಳರನ್ನು ಓಡಿಸಿಬಿಟ್ಟರೆ, ಆಮೇಲೆ ಆ ಸ್ತ್ರೀಯರನ್ನು ಹುಡುಕುವುದೇನೂ ಕಷ್ಟವಿಲ್ಲ.



ನಮ್ಮ ಲಕ್ಷ್ಯವೆಲ್ಲ ಕಳ್ಳರ ಮೇಲೆ ಇರಲಿ!" ಎಂದನು. ಆಗ ಸಮುದ್ರಕೇತು ತನ್ನ ಅನುಚರರೊಂದಿಗೆ ಮರಗಳ ಗುಂಪಿನ ಹತ್ತಿರ ಹತ್ತಿರ ಬಂದುಬಿಟ್ಟನು. ವಜ್ರಮುಷ್ಟಿ ಎತ್ತರವಾದೊಂದು ಮರದ ಮೇಲೆ ಹತ್ತಿ, ಕೆಳಗೆ ಬಾಗಿದ್ದ ಒಂದು ಕೊಂಬೆಯ ಮೇಲೆ ಹಾವಿನಹಾಗೆ ಮಲಗಿದನು.

ಸಮುದ್ರಕೇತು ಆ ಮರದ ಕೆಳಭಾಗಕ್ಕೆ ಬಂದದ್ದೇ ತಡ, ವಜ್ರಮುಷ್ಟಿ "ಜೈ ಕಾಲಕೇಯಾ" ಎಂದು ಕೂಗಿ ವಜ್ರಕೇತನ ಮುಂದೆ ಹಾರಿದನು.

ಅದೇ ಸಮಯದಲ್ಲಿ "ಜೈ ಮರಾಳೀ!" ಎನ್ನುತ್ತ ಶಿವದತ್ತ ಮಂದರದೇವಾದಿಗಳೂ ಒಮ್ಮೆಗೇ ಮರಗಳಾಚೆಯಿಂದ ಹೊರಬಿದ್ದು ಸಮುದ್ರಕೇತನ ಮೇಲೆ ಲಂಘಿಸಿದರು.

ಆ ಕ್ಷಣದಲ್ಲಿ ಈ ಹೊಸ ಆಕ್ರಮಣದಿಂದ ಬೆಕ್ಕಸ ಬೆರಗಾದ ಸಮುದ್ರಕೇತು, ಮರುಕ್ಷಣದಲ್ಲಿ ಭೀಕರ ವಾಗಿ ಗರ್ಜಿಸಿದನು. ಅಷ್ಟರೊಳಗೆ ವಜ್ರಮುಷ್ಟಿ ಕಡಲ್ಗಳ್ಳರಲ್ಲೊಬ್ಬನ ಕತ್ತಿಯನ್ನು ಎಳೆದುಕೊಂಡು, ಸಿಂಹದ ಹಾಗೆ ಇಬ್ಬರು ಮೂವರನ್ನು ಕಡಿದು ಚೆಲ್ಲಿದನು. ಕಳ್ಳರು ದಂಗಾಗಿ ಮರಗಟ್ಟಿಹೋದರು.

"ಹೆದರಬೇಡಿ! ಓಡಬೇಡಿ!" ಎಂದು ಸಮುದ್ರ ಕೇತನು ತನ್ನ ಅನುಚರರಿಗೆ ಧೈರ್ಯ ಹೇಳಿ ಕಾಲಕೇಯನ ಜಯಾಕಾರದೊಂದಿಗೆ ಶಿವದತ್ತನ ಮೇಲೆ ಕೈ ಚಳಕ ತೋರಿಸಿದನು. ಈ ಹೊಸ ಗಂಡಾಂತರಕ್ಕೆ ಹೆದರಿದ ಅವನ ಅನುಚರರು ಕೆಲವರು ಸಮುದ್ರದ ಕಡೆಗೆ ಓಡಲು ತೊಡಗಿದ್ದರು. ಮರಗಳ ಗುಂಪಿನೊಳಗೆ ಬಹಳಮಂದಿ ಹೊಸ ಶತ್ರುಗಳು ಇರಬಹುದೆಂದು ಅವರಿಗೆ ಭಯ!

ಅಷ್ಟರಲ್ಲಿ ಮತ್ತೊಂದು ಕಡೆಯಿಂದ ಮೂವರು ಸೈನಿಕರು ಭೀಕರವಾಗಿ ಗರ್ಜಿಸಿ ಕಳ್ಳರ ಕಡೆಗೆ ಓಡಿ ಬಂದರು.

ಆದರೆ ಸಮುದ್ರಕೇತನು ಮಾತ್ರ ಹೆದರಲಿಲ್ಲ. ಶಿವದತ್ತನೊಂದಿಗೆ ತನ್ನ ಮಹಾಕೃಪಾಣದಿಂದ ಹೊಡೆದಾಡುತ್ತಾ ಸ್ವಲ್ಪ ಸ್ವಲ್ಪ ಹಿಂಜರಿಯಲೂ ತೊಡಗಿದನು. ಆಗಾಗ ಹಿಂದಿರುಗಿ ನೋಡುತ್ತ



"ಓಡದಿರ್ರೋ! ಶತ್ರುಗಳು ನಾಲ್ಕಾರು ಮಂದಿ ಯಷ್ಟೇ! ಒಮ್ಮೆಗೇ ಮುಂದೆ ಬಂದು ಹೊಡೆಯಿರಿ" ಎಂದು ಕೂಗಿ ಕೂಗಿ ಹೇಳುತ್ತಿದ್ದನು.

ತಮ್ಮ ಒಡೆಯನ ಕೂಗು ಕೇಳಿ ಧೈರ್ಯಗೊಂಡು ಕಳ್ಳರು ಹಿಂದಿರುಗಿ ಬಂದು ಶಿವದತ್ತಾದಿಗಳ ಮೇಲೆ ಮತ್ತೆ ಬಿದ್ದರು.

ನಾಲ್ಕು ನಿಮಿಷಗಳವರೆಗಷ್ಟೆ ಸರಿಸಮನಾದ ಕಾದಾಟ ನಡೆಯಿತು. ವಜ್ರಮುಷ್ಟಿಯನ್ನು ನಾಲ್ಕೈದು ಮಂದಿ ಕಳ್ಳರು ಮುತ್ತಿಕೊಂಡರು. ಆದರೆ ಅವನು ಎಲ್ಲರ ಕತ್ತಿಗಳನ್ನೂ ತಟ್ಟಿ ದೂಡಿ ತಪ್ಪಿಸಿಕೊಳ್ಳುತ್ತ, ತನ್ನ ಕೈಯಲ್ಲಿದ್ದ ಕತ್ತಿಯನ್ನು ಮಿಂಚಿನ ವೇಗದಿಂದ ತಿರುಗಿಸುತ್ತ ಅವರಲ್ಲಿ ಕೆಲವರನ್ನು ಗಾಯಪಡಿಸಿ ಕೆಡವಿದನು.

ಒಬ್ಬನು ಗಾಯಗೊಂಡು ಸಾಯುವಹಾಗೆ ಕೂಗಿ ಬಿದ್ದ ಕೂಡಲೇ, ಆ ಸ್ಥಳದಲ್ಲಿ ಇನ್ನೊಬ್ಬ ಕಳ್ಳನು ತಯಾರಾಗಿರುತ್ತಿದ್ದನು.

ಇಂತಹ ಹೋರಾಟವು ಬಹಳಹೊತ್ತು ಸಾಗ ಲಾರದೆಂದು ಶಿವದತ್ತನಿಗೆ ಗೊತ್ತಾಯಿತು. ಇಷ್ಟರಲ್ಲಿ ಆ ಸ್ತ್ರೀಯರು ನಿರಪಾಯವಾಗಿ ದೂರ ಹೋಗಿರ ಬಹುದು. ಸಮುದ್ರಕೇತು ಪ್ರಾಯದಲ್ಲಿ ಶಿವದತ್ತನಿ ಗಿಂತ ಚಿಕ್ಕವನು. ಅವನ ತಡಗಿನಿಂದ ಇನ್ನೂ ಹಲವರು ಬರುವುದು ನಿಜ. ಆಮೇಲೆ ಅವರೆಲ್ಲ ರೊಂದಿಗೆ ತಮ್ಮಿಂದ ಹೋರಾಡುವುದು ಸಾಧ್ಯ ವಾಗದು. ತಾವೆಲ್ಲರೂ ಅನ್ಯಾಯದ ಸಾವಿಗೆ ಗುರಿಯಾಗುವುದರಲ್ಲಿ ಯಾವ ಅರ್ಥವೂ ಇಲ್ಲ. ಆದುದರಿಂದ ಈ ದುಷ್ಟರ ಟೋಳಿಯಿಂದ ಪಲಾಯನ ಮಾಡುವುದೇ ಒಳ್ಳೆಯದೆಂದು ಶಿವ ದತ್ತನು ನಿರ್ಣಯಿಸಿದನು. ಆ ಅನಾಥ ಸ್ತ್ರೀಯರನ್ನು ಕಾಪಾಡುವ ಆಪದ್ಬಾಂಧವ್ಯತೆಯ ಉದ್ದೇಶ ಸಿದ್ಧಿಸಿ ತೆಂದೇ ನಂಬೋಣವೆಂದುಕೊಂಡು ಶಿವದತ್ತನು "ಜೈ ಮರಾಳೀ!" ಎಂದು ಒಂದು ದೊಡ್ಡ ಕೂಗುಹಾಕಿ, ಸಮುದ್ರಕೇತನ ಟೊಂಕದ ಮೇಲೊಂದು ಬಲವಾಗಿ ಒದ್ದನು. ಸಮುದ್ರಕೇತನು ಆ ಪೆಟ್ಟಿಗೆ ಹಿಂದಕ್ಕೆ ಬಿದ್ದು ಮತ್ತೆ ಏಳುವುದ ರೊಳಗೆ ಶಿವದತ್ತನು ತನ್ನವರಿಗೆ ಕೈಸನ್ನೆ ಮಾಡಿ, ಮರಗಳ ಗುಂಪಿನೊಳಗೆ ಓಡಿದನು.

ಅವನ ಸೂಚನೆಯನ್ನರಿತು, ಮಂದರದೇವನೂ ಸೈನಿಕರೂ ಹಿಂದಡಿ ತೆಗೆದರು. ಕಣ್ಣುಮುಚ್ಚಿ ಬಿಡಿಸುವುದರೊಳಗೆ ಶಿವದತ್ತ, ಮಂದರದೇವ ಮೊದಲಾದವರು ಮರಗಳ ಗುಂಪಿನೊಳಗೆ ತೂರಿ ಮಾಯವಾದರು. ಸಮುದ್ರ ಚೋರನಿಗೆ ಇದೊಂದು ಇದಿರುನೋಡದ ಆಘಾತವಾದುದರಿಂದ ಬೆಕ್ಕಸ ಗೊಂಡು ನಿಂತುಬಿಟ್ಟನು. (ಇನ್ನೂ ಇದೆ)






## ೧೬

[ ಸಮುದ್ರತೀರದ ಕಡೆಯಿಂದ ಕೇಳಿ ಬಂದ ಕೂಗನ್ನು ತಿಳಿದುಕೊಳ್ಳಲು ಹೋದ ಶಿವದತ್ತ ಮೊದಲಾದವರಿಗೆ ಸಮುದ್ರಚೋರ ನಾಯಕನಾದ ಸಮುದ್ರಕೇತನು ಕಾಣಿಸಿದನು. ಅವನಿಂದ ತಪ್ಪಿಸಿಕೊಂಡು ಬಂದ ಇಬ್ಬರು ಸ್ತ್ರೀಯರು ಅಡವಿಯೊಳಗೆ ಓಡಿ ಹೋಗಿದ್ದರು. ಅವರನ್ನು ಬೆಂಬತ್ತಿಕೊಂಡು ಬಂದ ಸಮುದ್ರಕೇತನನ್ನು ಇದಿರಿಸಬೇಕೆಂದು ಶಿವದತ್ತನು ಹೊಂಚುತ್ತಿದ್ದನು. ]

ಶಿವದತ್ತನು ತನ್ನ ಅನುಚರರೊಂದಿಗೆ ಮರ ಪೊದರುಗಳ ಮರೆಯಲ್ಲಿ ಸ್ವಲ್ಪವೂ ಸದ್ದಾಗದಂತೆ ಉಸಿರು ಬಿಗಿದುಕೊಂಡು ನೋಡುತ್ತಿದ್ದನು. ತೀರದಲ್ಲಿ ಬಂದು ನಿಂತ, ಚೋರರತೋಳಿಯ ಎರಡು ನೌಕೆಗಳಿಂದ ಉತ್ಸಾಹದ ಕೇಕೇಕೂಗಾಟದೊಂದಿಗೆ ಅನೇಕ ಮಂದಿ ಸಮುದ್ರ ಚೋರರು ಕೆಳಗಿಳಿದರು. ಕೆಲವರು ಒಬ್ಬರುನ್ನೊಬ್ಬರು ದೂಡಿ ಹಾರಿ ಹಾರಿ ಇಳಿದರು,

ಮೊದಲು ತೀರದ ಮರಳನ್ನು ತಲಪಿದ ಸಮುದ್ರಕೇತನು, ತೆರೆಗಳ ನಡುವೆ ಈಜಿ ಬಂದ ಅತ್ಯಾಯಾಸದಿಂದ, ತನ್ನ ಕತ್ತಿಯನ್ನು ಮರಳಿನಲ್ಲಿ ಚುಚ್ಚಿ, ಉಸ್ಸೆಂದು ಶ್ವಾಸ ಬಿಟ್ಟು " ಹೇಯ್ ! ಅವರಾರೋ ಹೆದರಿ ಕಾಡಿನೊಳಗೆ ಅಡಗಿದ್ದಾರೆ. ಎಷ್ಟು ಹೊತ್ತು ನಿಮಗೆ ? ಸೋಮಾರಿಗಳೇ ! ಓಡಿಬನ್ನೋಬೇಗ ? " ಎಂದು ಹಿಂದಿರುಗಿ ಬಂದ ತನ್ನ ಅನುಚರರನ್ನು ಬೈದನು. ಎಲ್ಲರೂ ಅವನ ಹತ್ತಿರ ಬಂದು ಸೇರುತ್ತಲೇ ಸಮುದ್ರಕೇತನು ಕಾಡಿನ ಕಡೆಗೆ ಬೆರಳು ತೋರಿಸಿ, " ಆ ಹೆಣ್ಣುಗಳೆರಡೂ ಆ ಕಡೆಗೆ ಓಡಿವೆ. ಅದು ತಿಳಿಯದೆ ಎಲ್ಲೆಲ್ಲಿಗೋ ಓಡಿದರೆ ಏನುಲಾಭ ? ಇಪ್ಪತ್ತು ಮಂದಿ ಮಾತ್ರ ಇಲ್ಲಿರಿ. ಉಳಿದವರೆಲ್ಲಾ ಕಾಡಿನೊಳಗೆ ಹೋಗಿ ನಾಲ್ಕೂಕಡೆ ಹುಡುಕಿ ಆ



ಹೆಣ್ಣು ದೆವ್ವಗಳನ್ನು ಹಿಡಿದು ತರಲೇಬೇಕು. ಬರಿಗೈಯಲ್ಲಿ ಬಂದು ಗಿಂದೀರಿ! ಮುಖ ನೋಡದೆ ಕಡಿದು ಹಾಕೇನು! ಜೋಕೆ!" ಎಂದು ಅಪ್ಪಣೆ ಮಾಡಿದನು.

ಮರುಕ್ಷಣದಲ್ಲೇ ಕಳ್ಳರೆಲ್ಲ ಬಿರಬಿರನೆ ಕಾಡಿನ ಕಡೆಗೆ ಓಡಿದರು. ಸಮುದ್ರಕೇತನು ಅವರಿಗೆ ಹೇಳಿದ ಮಾತುಗಳನ್ನೆಲ್ಲ ಶಿವದತ್ತನು ಕೇಳಿದನು. ಅವನೊಂದಿಗೆ ಅಡಗಿಕೊಂಡಿರುವವರೆಲ್ಲರೂ ಕೇಳಿದರು, ನೋಡುತ್ತಲೂ ಇದ್ದರು. ಆದರೆ ಅಷ್ಟು ಮಂದಿ ಕಳ್ಳರನ್ನು ಹೇಗೆ ಹೊಡೆಯಬೇಕೆಂಬುದು ಮಾತ್ರ ಯಾರಿಗೂ ಗೊತ್ತಾಗಲಿಲ್ಲ. ಕೈಕಾಲುಗಳು ತುಡಿಸುತ್ತಿದ್ದರೂ ವಿವೇಕವು ಅಲುಗಲುಬಿಡದೆ ನಿರಾಶೆಯಿಂದ ಮುಖ ಮುಖ ನೋಡಿಕೊಂಡರು. ಅಷ್ಟೇ.

ಮಂದರದೇವನು ಶಿವದತ್ತನೊಂದಿಗೆ ಮೆಲ್ಲನೆಯಲ್ಲಿ, "ಅಲ್ಲ ಶಿವದತ್ತಾ. ಈಗ ನಾವೇನು ಮಾಡಿದರೆ ಒಳ್ಳೆಯದಾದೀತು? ಹೀಗೆ ನೋಡುತ್ತಾ ಸುಮ್ಮನಿರಲು ನನಗಂತೂ ಸಾಧ್ಯವಿಲ್ಲ. ಪಾಪ, ಆ ಓಡಿಹೋದ ಇಬ್ಬರು ಅಬಲೆಯರನ್ನು ಈ ಸಮುದ್ರ ಚೋರರು ಹಿಡಿಯದೆ ಬಿಡಲಾರರೆಂದೇ ಕಾಣುತ್ತದೆ. ಆ ಮೇಲೆ ಅವರಿಗಾವ ಹಿಂಸೆಯನ್ನು ನೆನೆದರೆ ಮೈಯೆಲ್ಲಾ ಜಮುಗುಡುತ್ತದೆ." ಎಂದನು.

ಶಿವದತ್ತನು ನಿಸ್ಸಹಾಯಕನಂತೆ ತಲೆಯಾಡಿಸುತ್ತ "ಈಗ ಆ ದುಷ್ಟರಿಗೂ ನಮಗೂ ಅಜಗಜಾಂತರ. ಈ ಪರಿಸ್ಥಿತಿಯಲ್ಲಿ ನಾವೇನು ಮಾಡಲೂ ಸಾಧ್ಯವಿಲ್ಲ. ನಾವು ಕೇವಲ ಎಂಟೇ ಮಂದಿಗಳು. ಅಸಂಖ್ಯಾಕರಾದ ಈ ಕಳ್ಳರನ್ನು ಮೊಂಡುತನದಿಂದ ದುಡುಕಿ ಆಕ್ರಮಿಸಿಬಿಟ್ಟರೆ ನಮಗೆ ಸರ್ವನಾಶವೇ ಫಲ. ಇಷ್ಟು ಹೊತ್ತಿಗೆ ಆ ಸ್ತ್ರೀಯರು ಬಹಳ ದೂರ ಹೋಗಿದ್ದಾರು. ದೇವರ ದಯೆ ಅವರ ಮೇಲಿದ್ದೀತು. ಎಲ್ಲಿಯೋ ಅಡಗಿದ್ದಾರೆಂದೇ ನಂಬೋಣ. ತಾಳಿಕೊಳ್ಳಿರಿ ಮಂದಿರದೇವ ಪ್ರಭೂ" ಎಂದನು.

ಸ್ವಲ್ಪ ಹೊತ್ತಿನಲ್ಲಿ ಆ ನಂಬುಗೆಗೂ ಮಣ್ಣು ಬಿತ್ತು. ಕಾಡಿನೊಳಗೆಲ್ಲಾ ಮಾರ್ಮೊಳಗುವ ಹಾಗೆ ಕಳ್ಳರ ಉತ್ಸಾಹದ ಕೂಗಾಟಗಳು ಹಿಂದಿರುಗಿ ಬರುವವರಿಂದ ಕೇಳ ತೊಡಗಿತು. ಮಧ್ಯೆ ಮಧ್ಯೆ ಸ್ತ್ರೀ ಕಂಠದ ಚೀತ್ಕಾರವೂ ಕೇಳಿತು. ಸ್ವಲ್ಪ ಹೊತ್ತಿಗೆ ಅವರೆಲ್ಲಾ ಸಮುದ್ರಕೇತನ ಬಳಿಗೆ ಬಂದು, "ಅಯ್ಯಾ, ಆ ಮುದುಕಿ ಕಾಣಲೇ ಇಲ್ಲ. ಇವಳು ಮಾತ್ರ ಸಿಕ್ಕಿಬಿಟ್ಟಳು," ಎಂದು ಹೊತ್ತು ತಂದ ಒಬ್ಬಳನ್ನು ಕೆಳಗಿಳಿಸಿ ಹಿಡಿದು ನಿಲ್ಲಿಸಿದರು. ಅವಳು ಗಡಗಡನೆ ನಡುಗುತ್ತಾ, ಕಲ್ಲು ಕರಗುವಂತೆ ಆಕ್ರಂದನ ಮಾಡುತ್ತಿದ್ದಳು. ಅಸ್ತವ್ಯಸ್ತಳಾಗಿದ್ದ ಅತ್ಯಂತ ಸುಂದರಿಯಾದ ತರುಣೀ ಮಣಿಯವಳು.

ಅವಳ ದೀನ ಪರಿಸ್ಥಿತಿಯನ್ನು ನೋಡಿ ಸಮುದ್ರಕೇತನು ದೊಡ್ಡ ದನಿಯಿಂದ ನಕ್ಕು, "ಭೇಷ್! ನಮಗೆ ಬೇಕಾದವಳು ಇವಳೇ. ರಾಶಿ ರಾಶಿ ಹಣವನ್ನು ತರುವವಳು ಇವಳೇ! ಆ ಮುದುಕಿ ನಮಗೇಕೆ? ಸುಮ್ಮನೆ ತಿಂಡಿ ದಂಡ! ಹುಂ,

ಇನ್ನು ಎಲ್ಲರೂ ಹಡಗೇರಿರಿ ! ಹೊರಡಿರಿ. ಎಚ್ಚರ ! ಇವಳನ್ನು ಅಲುಗಾಡಲು ಬಿಡಬೇಡಿ !" ಎಂದು ಹೇಳಿ ಹಿಂದಿರುಗಿ ನೋಡಿ "ಅಂದಹಾಗೆ ಇಲ್ಲಿ ಯಾರೋ ಹೊಸ ಮನುಷ್ಯರು ಸೇರಿದಂತಿತ್ತಲ್ಲಾ ? ನಿಮ್ಮ ಕಣ್ಣಿಗೆ ಬಿದ್ದರೇ ? ಗುರುತು ಹಿಡಿದಿರಾ ? ಯಾವುದಕ್ಕೂ ಈ ಪ್ರದೇಶವನ್ನು ಗುರುತಿಟ್ಟುಕೊಳ್ಳಿ. ಇಲ್ಲಿ ಬಂದವರಾರಾದರೂ ನಮ್ಮ ಕೈಗೆ ಸಿಕ್ಕಿ ಬೀಳಲೇ ಬೇಕು. ಲಾಭವನ್ನು ಏಕೆ ಬಿಡಬೇಕು? ಸಮಯ ನೋಡಿ ಬಂದು ಅವರನ್ನೆಲ್ಲಾ ಬೇಟೆಯಾಡದೆ ಬಿಡಬಾರದು" ಎಂದನು ರೋಷದಿಂದ.

ಸಮುದ್ರಕೇತನ ಹಡಗುಗಳೆಲ್ಲ ತೀರವನ್ನು ಬಿಟ್ಟು ಸಮುದ್ರದಲ್ಲಿ ಹೋಗತೊಡಗಿದವು. ಅವರೆಲ್ಲ ಆ ಹುಡುಗಿಯನ್ನೆತ್ತಿಕೊಂಡು ಕೆಲವೇ ನಿಮಿಷಗಳಲ್ಲಿ ಹಡಗುಗಳನ್ನೇರಿ ಹೋಗುವ ಅವರ ಚುರುಕುತನವನ್ನು ಕಂಡು ಶಿವದತ್ತ ಮೊದಲಾದವರಿಗೆ ಆಶ್ಚರ್ಯವಾಯಿತು. ಸಮುದ್ರವು ಅವರಿಗೊಂದು ಆಟದ ಬಯಲಿನಂತೆ ಅನಿಸಿತು.

ಶಿವದತ್ತನು ದೂರ ದೂರ ಹೋಗುತ್ತಿದ್ದ ಆ ಹಡಗುಗಳ ಕಡೆಗೆ ನೋಡುತ್ತ, "ಇನ್ನು ನಾವು ಮಾಡುವಂತಹುದೇನೂ ಇಲ್ಲ. ಯಾರ ಹಣೆಯಲ್ಲಿ ಏನು ಬರೆದಿದೆಯೋ ಅದನ್ನು ತಪ್ಪಿಸಲು ಯಾರಿಗೂ ಸಾಧ್ಯವಿಲ್ಲ. ಉಳಿದು ಹೋದ ನಮ್ಮ ಊಟವನ್ನು ಹೊಟ್ಟೆಯೊಳಗೆ ತುರುಕಿಕೊಳ್ಳೋಣ, ಬನ್ನಿರಿ. ಸುಮ್ಮನೆ ಇಲ್ಲಿ ಯೋಚನೆ ಮಾಡಿದರೆ ಏನು ಪ್ರಯೋಜನ ? " ಎಂದನು.

ಅವರೆಲ್ಲ ಅಲ್ಲಿಂದ ಕದಲಿ ನಾಲ್ಕೈದಡಿ ಇಡುತ್ತಿರಲು ಸಮೀಪದಲ್ಲೆಲ್ಲೋ ಮತ್ತೊಬ್ಬಳು ಸ್ತ್ರೀಯ ಕಂಠದಿಂದ ಸರ್ವನಾಶವಾದಂತೆ ಹೊರಡುವ ಅಳುದನಿ ಕೇಳತೊಡಗಿತು.

ಶಿವದತ್ತನು ಬೆಚ್ಚಿಬಿದ್ದು ಮಂದರದೇವನನ್ನು ನೋಡಿ, ಆ ರೋದನ ಧ್ವನಿ ಹೊರಡುವ ಕಡೆಗೆ



ತಿರುಗಿದನು. ಎಲ್ಲರೂ ಅವನನ್ನು ಅನುಸರಿಸಿ ನಡೆದರು. ತಮ್ಮ ಊಟಕ್ಕೆ ಎಷ್ಟು ವಿಘ್ನಗಳಪ್ಪಾ ಅನಿಸಿತು ಸೈನಿಕರಿಗೆ. ಆ ಊಟ ಕೂಡಾ ಅಲ್ಲಿ ಕಾದಿರುವುದೆಂದು ಏನು ನಂಬುಗೆ ?

ಸ್ವಲ್ಪ ಹೊತ್ತಿಗೆ ಅವರೆಲ್ಲಾ ಆ ಸ್ತ್ರೀಯ ಬಳಿಗೆ ತಲುಪಿದರು. ಅವಳು ಬೇರೆ ಯಾರೂ ಅಲ್ಲ; ಸಮುದ್ರಕೇತನ ಕೈಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ ಇಬ್ಬರು ಸ್ತ್ರೀಯರಲ್ಲಿ ಅವಳೊಬ್ಬಳೆಂದು ನೋಡಿದ ಕೂಡಲೇ ತಿಳಿಯಿತು.

"ಅಮ್ಮಾ, ಯಾರು ನೀನು ? ಹೆಸರೇನು ? ಯಾವ ದೇಶದವಳು ? ಏನಾಯಿತು ? ಹೇಳುವ ಶಕ್ತಿಯಾದರೂ ಇದೆಯೇ ? " ಎಂದು ಒಮ್ಮೆಗೇ ಪ್ರಶ್ನೆಗಳ ಮೇಲೆ ಪ್ರಶ್ನೆ ಮಾಡಿದನು.

ಶಿವದತ್ತನ ಪ್ರಶ್ನೆಗಳನ್ನು ಕೇಳಿ ಅವಳು ಬೆಚ್ಚಿಬಿದ್ದು ಅವನ ಮುಖವನ್ನೇ ಮಿಳಿ ಮಿಳಿ ನೋಡಿದಳು. ಅವನ ಅನುಚರರ ಮುಖಗಳನ್ನೂ ಹೆದರಿಕೆಯ

ದೃಷ್ಟಿಯಿಂದ ನೋಡಿದಳು. ಅದನ್ನು ಗಮನಿಸಿದ ಶಿವದತ್ತನು, "ಅಮ್ಮಾ, ಹೆದರಬೇಡ. ನಮ್ಮಿಂದ ನಿನಗೆ ಯಾವ ಕೇಡೂ ಬಾರದು. ನೀನು ಇನ್ನೊಬ್ಬಳು ಹುಡುಗಿಯೊಂದಿಗೆ, ಸಮುದ್ರಕೇತನ ಕೈಯಿಂದ ತಪ್ಪಿಸಿಕೊಂಡು ಹೋದುದನ್ನೆಲ್ಲ ನಾವು ನೋಡಿದ್ದೇವೆ. ನಾವು ಬರೇ ಎಂಟು ಜನರು ಮಾತ್ರ ಆದುದರಿಂದ ಏನೂ ಮಾಡಲಾಗದೆ ಹೋದೆವು. ಆ ದುಷ್ಟರು ಸುಮಾರು ಐವತ್ತರುವತ್ತು ಮಂದಿ ಇದ್ದಾರಪ್ಪೇ? ನಾವು ಕೈ ಕೈ ಹೊಸಕಿಕೊಳ್ಳುತ್ತ ಸುಮ್ಮನಿರಬೇಕಾಯಿತಮ್ಮಾ. ಹೇಳು, ನಿನ್ನ ಸಂಗತಿಯನ್ನಾದರೂ ಹೇಳು. ನಿನಗೆ ಉಪಕಾರ ಮಾಡಲು ಏನಾದರೂ ದಾರಿ ಇದೆಯೋ ನೋಡೋಣ." ಎಂದನು.

"ಏನು ಹೇಳಲಿ! ನಮ್ಮ ಸ್ವಯಂಪ್ರಭೆಯನ್ನು ಆ ಕ್ರೂರರು ಮತ್ತೆ ಹಿಡಿದುಕೊಂಡು ಹೋದರು! ಆ ಕ್ರೂರರ ಕೈಗೆ ಸಿಕ್ಕಿದ ಮೇಲೆ ಮತ್ತೆ ನಮಗೆ ಸಿಗುವುದುಂಟೆ? ಅಯ್ಯೋ! ಸ್ವಯಂಪ್ರಭಾ! ನಿನ್ನನ್ನು ಉಳಿಸಲಾರದೆ ಹೋದೆನಲ್ಲಾ?" ಎಂದು ಆ ಸ್ತ್ರೀ ದೊಡ್ಡ ದನಿಯಿಂದ ಅಳಲು ಶುರು ಮಾಡಿದಳು. ಕಣ್ಣೀರು ಧಾರೆ ಧಾರೆಯಾಗಿ ಸುರಿಸಿದಳು.

ಶಿವದತ್ತನು ಅವಳ ದುಃಖವನ್ನು ಶಮನ ಮಾಡಲು ತೊಡಗಿದನು. ತಾವು ಅವಳಿಗೆ ಸಹಾಯ ಮಾಡಬಲ್ಲೆವೆಂಬ ನಂಬುಗೆ ಅವಳಿಗಾಗುವಂತೆ ತಮ್ಮ ಕಥೆಯನ್ನು ಸಂಕ್ಷೇಪವಾಗಿ ಹೇಳಿದನು.

ಅದನ್ನೆಲ್ಲ ಕೇಳಿದ ಮೇಲೆ ಅವಳು ದುಃಖವನ್ನು ನುಂಗಿ ಧೈರ್ಯ ತಂದುಕೊಂಡು, "ಅಯ್ಯಾ, ನನ್ನ ಹೆಸರು ದೇವಮಾಯಿ; ಶಮನ ದ್ವೀಪದವಳು. ಹನ್ನೆರಡು ವರ್ಷಗಳ ಹಿಂದೆ ಈ ಕಡಲಿನ ಕಳ್ಳ ಸಮುದ್ರಕೇತನು ನನ್ನನ್ನು ಬಲಾತ್ಕಾರದಿಂದ ಬಂದಿಯಾಗಿ ಹಿಡಿದುಕೊಂಡು ಹೋದನು. ಅಂದಿನಿಂದ ಅವನ ಹತ್ತಿರ ಸೇವಕಿಯಾಗಿ ಬದುಕಿಕೊಂಡಿದ್ದೇನೆ. ಈಗ ಅವನು ಬಂಧಿಸಿಕೊಂಡು ಹೋದ ಕನ್ಯೆಯ ಹೆಸರು ಸ್ವಯಂಪ್ರಭೆ. ನಾಲ್ಕು ದಿನಗಳ ಹಿಂದೆ ಅವಳು ಶಮನ ದ್ವೀಪದ ಕಡಲ ತೀರದಲ್ಲಿ ಏನೋ ಆಟವಾಡಿಕೊಂಡು ವಿಹರಿಸುತ್ತಿದ್ದಾಗ ಸಮುದ್ರಕೇತನು



ಅವಳನ್ನು ಹಿಡಿದುಕೊಂಡನು. ನನಗೂ ಅವಳಿಗೂ ತಾಯಿಮಗಳಷ್ಟು ಅಚ್ಚುಮೆಚ್ಚು" ಎಂದು ಅಲ್ಲಿಗೆ ನಿಲ್ಲಿಸಿ ಉಸಿರು ಬಿಡತೊಡಗಿದಳು.

"ಹಾಗಾದರೆ ಅವನ ಹತ್ತಿರ ನೀನು ಅಷ್ಟು ವರ್ಷಗಳಿಂದ ಇರುವಿಯೆಂದಾಯಿತು. ಆದ್ದರಿಂದ ಆ ಕ್ರೂರನನ್ನು ಕುರಿತು, ಅವನ ಬಲಾಬಲಗಳ ರಹಸ್ಯಗಳನ್ನು ಕುರಿತು ನಿನಗೆ ಎಲ್ಲವೂ ಗೊತ್ತಿರಬಹುದು" ಎಂದನು ಶಿವದತ್ತ.

ದೇವಮಾಯಿ ತಲೆಯಾಡಿಸಿ, "ನಿಜ, ನಿಮ್ಮ ಊಹೆಯಂತೆ ಅವನ ಸಂಗತಿ ಪೂರಾ ನನಗೆ ಗೊತ್ತಿದೆ. ಈ ದ್ವೀಪದ ಪಶ್ಚಿಮ ದಿಕ್ಕಿನ ತೀರದಲ್ಲಿ ಮಕರ ಮಂಡಲವೆಂಬ ಗುಡ್ಡಗಾಡುಗಳು ತುಂಬಿದ ಎತ್ತರ ಪ್ರದೇಶವಿದೆ. ಆ ಪ್ರಾಂತಕ್ಕೆ ಹೋಗಲು ಒಂದೇ ಒಂದು ದಾರಿ ಮಾತ್ರವೇ. ಆ ದಾರಿಯಲ್ಲಿ ಅನೇಕ ಕುದುರುಗಳಿದ್ದು, ಅವುಗಳ ನಡುವೆ ಸಮುದ್ರದ ಉಪ್ಪು ನೀರಿನ ಅನೇಕ ಕವಲು ನದಿಗಳಿವೆ. ಅಂತಹ ಒಂದು ಕುದುರಿನ ಎತ್ತರ ಪ್ರದೇಶದಲ್ಲಿದೆ ಆ ಚೋರನಾಯಕನ ನಿವಾಸಸ್ಥಾನ. ಅದರ ದಿಕ್ಕು ದೆಸೆಗಳೆಲ್ಲ ನನಗೆ ಗೊತ್ತಿದ್ದರೂ ನಾವು ಹೋಗುವುದು ಬಹಳ ಕಷ್ಟ." ಎಂದಳು ದೇವಮಾಯಿ.

"ಹಾಗಾದರೆ ಸ್ವಯಂಪ್ರಭೆಯನ್ನು ಆ ಕ್ರೂರನು ಅಲ್ಲಿಗೇ ಹಿಡಿದುಕೊಂಡು ಹೋಗಿದ್ದಾನೆ ಅನ್ನು. ಆ ಮಕರ ಮಂಡಲದಲ್ಲಿ ವಾಸಿಸುವವರು ನಾಗರಿಕ ಜಾತಿಯವರೋ, ಅಲ್ಲ ಕೇವಲ ಕ್ರೂರ ಸ್ವಭಾವದ ಕಾಡು ಜಾತಿಯವರೋ ?" ಎಂದು ಶಿವದತ್ತನು ಕೇಳಿದನು.

"ಮಕರ ಮಂಡಲದ ನಿವಾಸಿಗಳು ಕೇವಲ ಅನಾಗರಿಕರು ಮಾತ್ರವೇ ಅಲ್ಲ; ಬೇಟೆಯೇ ಅವರಿಗೆ ಪ್ರಧಾನ ವೃತ್ತಿ, ಆ ಮಂಡಲಕ್ಕೆ ಒಬ್ಬ ರಾಜ ಕೂಡಾ ಇದ್ದಾನೆ. ಆದರೇನು ? ನಾಲ್ಕೈದು ವರ್ಷಗಳಿಂದ ಆ ಪ್ರಾಂತವೆಲ್ಲಾ ಬಹಳ ಭಯದಿಂದ ಅಲ್ಲಕಲ್ಲೋಲವಾಗಿದೆ, ಅದಕ್ಕೆ ಕಾರಣ ಗುಡ್ಡದ ಪಾತಳಿಯ ಮಡುವಿನಲ್ಲಿರುವ ಒಂದು ದೊಡ್ಡ ಮೊಸಳೆ !" ಎಂದಳು ದೇವಮಾಯಿ.






"ಏನೇನು ! ಕೇವಲ ಒಂದು ಮೊಸಳೆ, ಅದು ಎಷ್ಟೇ ದೊಡ್ಡದಾಗಿದ್ದರೂ ನಿರ್ದಯಿಗಳಾದ ಊರವರೆಲ್ಲಾ ಹೆದರುತ್ತಾರೆಂದರೆ ನಂಬಲಿಕ್ಕೇ ಸಾಧ್ಯವಿಲ್ಲ" ಎಂದನು ಶಿವದತ್ತ.

"ಅಯ್ಯಾ, ಅದು ಎಲ್ಲಾ ಮೊಸಳೆಗಳಂಥ ಸಾಧಾರಣ ಮೊಸಳೆಯಲ್ಲ!" ಎಂದು ದೇವಮಾಯಿ ವಿಕೃತಾಕಾರನಾದ ವಜ್ರಮುಷ್ಟಿಯನ್ನು ನೋಡಿ, ಬೆಚ್ಚಿಬಿದ್ದವಳಂತಾಗಿ. ಅರ್ಧ ಬಾಯಿ ತೆರೆದು ಹಾಗೆಯೇ ಸ್ತಬ್ಧಳಾದಳು.

"ಇವನು ಒಳ್ಳೆಯವನು ! ಹೆದರಬೇಡ ಹೇಳು" ಎಂದು ಶಿವದತ್ತನು ಧೈರ್ಯ ಹೇಳಿದ ಮೇಲೆ, "ಅಯ್ಯಾ, ಆ ಮೊಸಳೆ ಯಾವುದೋ ಒಂದು ದೇವತೆ. ಅದಕ್ಕೆ ಪೈಶಾಚಿಕ ಶಕ್ತಿಗಳಿವೆಯೆಂದು ಹೇಳುತ್ತಾರೆ. ಅದನ್ನು ಮಕರದೇವತೆ ಎಂದೇ ಕರೆಯುತ್ತಾರೆ. ಅದಕ್ಕೆ ಆಹಾರವಾಗಿ ಪ್ರತಿ ದಿನವೂ ನಾಲ್ಕೈದು ಮಂದಿ ಮನುಷ್ಯರನ್ನು ಹಾಕುತ್ತಾರೆ, ಆ ಕಾರ್ಯವನ್ನು ಸ್ವಯಂಪರಿಶಿಖಿರಾಜನೇ ನೋಡಿ ಕೊಳ್ಳುತ್ತಾನೆ. ಅದರ ಆಹಾರಕ್ಕೆ ಹೊರ ದೇಶದ ಸುಂದರಿಯರೇ ಆಗಬೇಕು, ಈ ಕಳ್ಳ ಸಮುದ್ರಕೇತನು ಅಂಥವರನ್ನು ಹಿಡಿದು ತಂದು ಮಕರಮಂಡಲದ ರಾಜನಿಗೆ ಮಾರುತ್ತಾನೆ. ಅವನು ಕೇಳಿದಷ್ಟು ಹಣ ಸಿಗುತ್ತದೆ. ಎಷ್ಟು ಸುಂದರಿಯೋ ಅಷ್ಟು ಹೆಚ್ಚು ಹಣ." ಎಂದಳು.

"ಓಹೋ ! ಹಾಗೇನು ಸಮಾಚಾರ ?" ಎಂದು ಶಿವದತ್ತನು ಮಂದರದೇವನನ್ನು ನೋಡಿದನು.

ಆಗ ವಜ್ರಮುಷ್ಟಿ ಮುಂದಡಿಯಿಟ್ಟು, "ಅಯ್ಯಾ, ನೀವು ಅನುಮತಿ ಕೊಟ್ಟರೆ, ಆ ಮೊಸಳೆಯನ್ನು ನಾನು ಸಂಹರಿಸಿ ಬಿಡುತ್ತೇನೆ. ಆ ಕೆಲಸ ಮುಗಿಸಲು ಈಗಲೇ ಮಕರಮಂಡಲಕ್ಕೆ ಹೋಗಲೆ ?" ಎಂದು ಕೇಳಿದನು.

ವಜ್ರಮುಷ್ಟಿಯ ಮಾತು ಕೇಳಿ ದೇವಮಾಯಿಯ ಮುಖದಲ್ಲಿ ಒಂದು ಸಂತೋಷದ ಕಳೆ ಎದ್ದಿತು. "ಅಂದ ಹಾಗೆ ಈ ಕುಳ್ಳಯ್ಯನನ್ನು ನೋಡುವಾಗ ನನಗೊಂದು ವಿಷಯ ನೆನಪಿಗೆ ಬರುತ್ತದೆ. ಎರಡು ವರ್ಷಗಳ ಕೆಳಗೆ ಮಕರಮಂಡಲದ ಹಳೆಯ ಪೂಜಾರಿಯ ಮೈಮೇಲೆ ದೇವರು ಬಂದು, ಭವಿಷ್ಯತ್ತಿನಲ್ಲಿ ನಡೆಯುವುದನ್ನು ಹೇಳಿದ್ದಾನೆ. ನಾಲ್ಕಡಿ ಎತ್ತರದ ವಿಕೃತಾಕಾರದ ಕುಳ್ಳನೊಬ್ಬ ಮಕರಮಂಡಲಕ್ಕೆ ಬಂದು ಸೇರುತ್ತಾನೆ, ಅವನ ಕೈಯಲ್ಲಿ ಆ ಮೊಸಳೆಗೆ ಸಾವು ಬರೆದಿದೆಯಂತೆ. ಆ ಮೇಲೆ ಮಕರ ಮಂಡಲಕ್ಕೆ ಯಾವ ಅರಿಷ್ಟಗಳೂ ಇಲ್ಲದೆ ತುಂಬಾ ಒಳಿತುಗಳು ಸಂಭವಿಸಿ ಮಕರಮಂಡಲವು ಸುಭಿಕ್ಷವಾಗುತ್ತದಂತೆ." ಎಂದಳು ದೇವಮಾಯಿ.

ಅವಳು ಹೇಳಿದುದನ್ನು ಕೇಳಿ ಶಿವದತ್ತನಿಗೆ ನಗು ಬಂದಿತು. ಅವನು ವಜ್ರಮುಷ್ಟಿಯನ್ನು ನೋಡಿ, "ಅವನು ಹೇಳಿದ ವಿಕೃತಾಕಾರದ ಕುಳ್ಳ ಈ ವಜ್ರಮುಷ್ಟಿಯೇ ಆಗಿರಬೇಕು. ನೀನು ಆ ಮಕರಮಂಡ



ಲಕ್ಕೆ ದಾರಿ ತೋರಿಸಬೇಕು. ನಾವೆಲ್ಲರೂ ಈಗ ಅಲ್ಲಿಗೆ ಹೋಗಿ ಬಿಡೋಣ" ಎಂದನು.

"ದಾರಿಯಲ್ಲಿ ಮೊದಲು ಸಮುದ್ರಕೇತನ ನಿವಾಸ ಸ್ಥಾನ ಸಿಗುತ್ತದಲ್ಲಾ. ಅದನ್ನು ತಪ್ಪಿಸಿ ಅವನ ಕಣ್ಣಿಗೆ ಬೀಳದಂತೆ ಅಲ್ಲಿಗೆ ಹೋಗಲು ಬೇರೆ ದಾರಿ ಯಾವುದೂ ಇಲ್ಲ. ಇದಕ್ಕೆ ಏನು ಮಾಡುವುದೋ ನನಗಂತೂ ತಿಳಿಯದು" ಎಂದಳು ದೇವಮಾಯಿ ಹೆದರಿ ನಡುಗುತ್ತ.

"ಆ ಸಾಧ್ಯಾಸಾಧ್ಯತೆಗಳನ್ನು ನಾವು ನೋಡಿಕೊಳ್ಳುತ್ತೇವೆ. ಸ್ವಯಂಪ್ರಭೆ ಕೂಡಾ ಈಗ ಆ ಕಳ್ಳರ ನಾಯಕನ ಸ್ವಾಧೀನದಲ್ಲಿ ತಾನೇ ಇರುತ್ತಾಳೆ? ಹೊರಡೋಣ" ಎಂದು ಮಂದರದೇವನು ಹೋಗುವ ತವಕವನ್ನು ವ್ಯಕ್ತಪಡಿಸಿದನು.

"ಹೌದು. ಅವಳನ್ನು ಮಕರದೇವತೆಯ ಆಹಾರವಾಗಿ ಮಾರಲಿಕ್ಕೇ ಹಿಡಿದಿದ್ದಾನೆ. ಸುಂದರಿಯರಾದ ಯುವತಿಯರಿಗೂ, ಬಲಿಷ್ಠರಾದ ಯುವಕರಿಗೂ ಹರಿಶಿಖಿ ರಾಜನು ಹೆಚ್ಚು ಧನ ಕೊಡುತ್ತಾನೆ. ಸಮುದ್ರಕೇತನು ಅಂಥವರಿಗಾಗಿ ಸಮುದ್ರ ತೀರದಲ್ಲಿ ಅಲೆದಾಡುತ್ತಾ ಇರುತ್ತಾನೆ" ಎಂದಳು ದೇವಮಾಯಿ.

ಶಿವದತ್ತನು ಹಲ್ಲುಕಡಿಯುತ್ತ, "ಇದು ಘೋರವಾದ ಅನ್ಯಾಯ. ಹೇಗಾದರೂ ಮಾಡಿ ಈ ಸಾರಿ ಆ ಸ್ವಯಂಪ್ರಭೆಯನ್ನು ರಕ್ಷಿಸಲೇಬೇಕು. ಆ ಕ್ರೂರ ಸಮುದ್ರಕೇತನನ್ನೂ ಇಲ್ಲದಂತೆ ಮಾಡಬೇಕು. ಹರಿಶಿಖಿರಾಜನ ಸಂಗತಿ ಆಮೇಲೆ ನೋಡಿಕೊಳ್ಳಬಹುದು" ಎಂದನು.

ಎಲ್ಲರೂ ಹೊರಡುವ ತವಕವನ್ನೇ ಸೂಚಿಸಿದರು. ದೇವಮಾಯಿಯನ್ನು ಕರೆದುಕೊಂಡು ಎಲ್ಲರೂ ತಯಾರಾಗಿರುವ ಆಹಾರ ಪಾಕದ ಕಡೆಗೆ ಹೋದರು. ಬೇಗಬೇಗನೆ ಅದನ್ನೆಲ್ಲ ಹಂಚಿಕೊಂಡು ತಿಂದು ತೀರಿಸಿ ತೇಗಿದರು. ಆಗ ಸೂರ್ಯನು ನಡುನೆತ್ತಿಗೇರಿದ ಹೊತ್ತು. ಎಲ್ಲರೂ ಸ್ವಲ್ಪ ಹೊತ್ತು ಭುಕ್ತಾಯಾಸ ತೀರಿಸಿಕೊಂಡ ಮೇಲೆ, "ಇನ್ನು ಏಳಿರೆಲ್ಲಾ, ಹೊತ್ತು ಮುಳುಗುವುದರೊಳಗೆ ಸಮುದ್ರಕೇತನ ನಿವಾಸಸ್ಥಾನ ಕಂಡುಹಿಡಿಯುವುದು ಎಲ್ಲದಕ್ಕೂ ಒಳ್ಳೆಯದು" ಎಂದು ಶಿವದತ್ತನು ಎದ್ದನು.

ದೇವಮಾಯಿಯೊಬ್ಬಳೇ ದಿಕ್ಕು ದಾರಿ ತಿಳಿದವಳಾದುದರಿಂದ ಮುಂದೆ ಅವಳನ್ನೇ ನಡೆಸಿದರು. ಅವಳ ಬದಿಗಳಲ್ಲಿಯೂ, ಹಿಂದೆಯೂ ಉಳಿದವರು ನಡೆದರು. ಅಲ್ಲಲ್ಲಿ ದಾರಿ ಸರಿ ಮಾಡುವ ಕೆಲಸ ಸೈನಿಕರು ಮಾಡಬೇಕಾಗುತ್ತಿತ್ತು. ಕಾಡಿನೊಳಗೆ ಸರಿಯಾದ ದಾರಿಯೊಂದು ಇದ್ದರೆ ತಾನೇ? ದೇವಮಾಯಿ ನಡೆಯುವ ದಿಕ್ಕೇ ದಾರಿಯಾಗಿತ್ತು. ಜನಸಂಚಾರದ ಗುರುತುಗಳು ಅಲ್ಲೆಲ್ಲಿಯೂ ಇರಲಿಲ್ಲ. ಒತ್ತೊತ್ತಾಗಿ ಬೆಳೆದ ಹೆಮ್ಮರಗಳನ್ನು ಅಪ್ಪಿಕೊಂಡು ಅನೇಕ ಬಗೆಯ ಕಾಡುಬಳ್ಳಿಗಳೂ, ಪೊದರುಗಳೂ ಬೆಳೆದಿದ್ದುವು. ಹಗಲು ಕೂಡಾ ಅಲ್ಲಲ್ಲಿ ದೊಡ್ಡ ಕತ್ತಲೆಯಾಗಿ ಕಾಣುತ್ತಿತ್ತು. ಅಲ್ಲಲ್ಲಿ ಮರಗಳ

ಮೇಲೆ ನೇತಾಡಿಕೊಂಡು ಹೆಬ್ಬಾವುಗಳಿದ್ದುವು. ಆದುದರಿಂದ ಆಯುಧಗಳನ್ನು ಸಿದ್ಧಪಡಿಸಿಕೊಂಡು, ಕಣ್ಣಿಗೆ ಕಣ್ಣಿಟ್ಟು ನೋಡುತ್ತಾ ಬಹಳ ಎಚ್ಚರಿಕೆಯಿಂದ ನಡೆಯುತ್ತಿದ್ದರು.

ಎಷ್ಟು ದೂರ ಹೀಗೆ ನಡೆದರೆಂದು ಗೊತ್ತಾಗಲಿಲ್ಲ. ಸೂರ್ಯಾಸ್ತದ ವೇಳೆ ಸಮೀಪಿಸಿತು. ಆಗ ವಜ್ರಮುಷ್ಟಿ ಎಲ್ಲರಿಗಿಂತ ಮುಂದೆ ನಡೆದು, ಬದಿಯಲ್ಲಿದ್ದ ದೊಡ್ಡದೊಂದು ಮರದ ಮೇಲೆ ಏರಿದನು. ಅಲ್ಲಿಂದ ಅವನು ನೋಡಿದಾಗ ಸುಮಾರು ಒಂದು ಕ್ರೋಶ ದೂರದಲ್ಲಿ ಸಮುದ್ರದ ಕವಲು ನದಿಗಳೂ, ಕುದುರುಗಳೂ ಹರಡಿರುವುದು ಕಂಡಿತು. ಚಿಕ್ಕ ದೊಡ್ಡ ನಡುಗಡ್ಡೆಗಳ ಭೂಭಾಗಗಳನ್ನೂ ಒಂದೆಡೆಯಲ್ಲಿ ಕೆಲವು ಮನುಷ್ಯರನ್ನೂ ಕಂಡನು.

ವಜ್ರಮುಷ್ಟಿ ಕೂಡಲೇ ಮರದಿಂದ ಇಳಿದು, ಶಿವದತ್ತನ ಬಳಿಗೆ ಬಂದು, "ಅಯ್ಯಾ, ನಮ್ಮ ದೇವಮಾಯಿ ಹೇಳಿದಂತಹ ಪ್ರದೇಶದ ಸಮೀಪಕ್ಕೆ ಬಂದುಬಿಟ್ಟೆವು. ಆ ಮರದ ಮೇಲಿನಿಂದ ನೋಡಿದರೆ ಹಾವುಗಳ ಹಾಗೆ ಬಳಸಿಕೊಂಡಿರುವ ಸಮುದ್ರದ ನದಿ ಕಾಲುವೆಗಳ ಬದಿಯಲ್ಲೆಲ್ಲ ಭೂಪ್ರದೇಶ ಕಾಣುತ್ತದೆ. ಒಂದು ಕಡೆ ಮನುಷ್ಯರೂ ಓಡಾಡಿಕೊಂಡಿದ್ದಾರೆ. ಅವರೆಲ್ಲ ಸಮುದ್ರಕೇತನ ಕಡೆಯವರೇ ಆಗಿದ್ದಾರು" ಎಂದನು.

"ಹಾಗಾದರೆ ಸ್ವಲ್ಪ ಯೋಚಿಸಬೇಕಾಗಿದೆ. ನಾವೆಲ್ಲ ಒಮ್ಮೆಗೇ ಮುಂದೆ ಹೋಗುವುದು ಸರಿಯಾಗದು. ಮೊದಲು ನೀನು ಮಾತ್ರ, ಇಬ್ಬರನ್ನು ಜತೆಗೆ ಕರೆದುಕೊಂಡು ಹೋಗಿ, ಅಲ್ಲಿಯ ಪರಿಸ್ಥಿತಿ ಏನೆಂಬುದನ್ನು ತಿಳಿದುಕೊಂಡು ಬಾ. ಆಗಬಹುದೇ ?" ಎಂದನು ಶಿವದತ್ತ.

"ಅದೇ ಒಳ್ಳೆಯದು" ಎಂದು ವಜ್ರಮುಷ್ಟಿ ಇಬ್ಬರು ಅನುಚರರನ್ನು ತನ್ನೊಂದಿಗೆ ಕರೆದುಕೊಂಡು ಮುಂದೆ ಹೊರಟನು. ಅವರು ಸದ್ದಾಗದಂತೆ ಎಚ್ಚರಿಕೆ ವಹಿಸಿ, ಮರಗಳ ಮರೆಯಲ್ಲಿ ಅಡಗಿಕೊಳ್ಳುತ್ತಾ ಜಾಗರೂಕತೆಯಿಂದ ನಡೆದು, ಕಾಲುವೆಗಳು ಕವಲೊಡೆದ ಪ್ರಾಂತವನ್ನು ತಲಪಿದರು. ಅಲ್ಲಿ ಕೆಲವು ಕಡೆ ಸಮುದ್ರವು ನದಿಯಂತೆ ಅಗಲವಾದ ಕೆಲವು ಶಾಖೆಗಳಾಗಿ ಹೊರಟಿದ್ದುವು. ಅವುಗಳ ಬದಿಯಲ್ಲೆಲ್ಲಾ ಪೊದರುಗಳಿದ್ದವು. ಮುಂದೆ ಕಾಣುವ ಉಪ್ಪು ನೀರಿನ ನದಿಯಲ್ಲಿ ಚಿಕ್ಕ ಚಿಕ್ಕ ತೆಪ್ಪಗಳು ಕಂಡುಬಂದುವು. ಆ ನದಿ ಐವತ್ತು ಅರವತ್ತು ಗಜಗಳಷ್ಟು ಅಗಲವಾಗಿತ್ತು.

ಅದರಾಚೆಗಿನ ಎತ್ತರವಾದ ನಡುಗಡ್ಡೆಯಲ್ಲಿ ಏನೇನೋ ಮಾತುಗಳೂ, ನಗುಗಳೂ, ಕೂಗಾಟ ಕುಣಿದಾಟಗಳೂ ನಡೆಯುವಂತೆ ಶಬ್ದ ಕೇಳಿಸುತ್ತಿದ್ದಿತು.

—(ಇನ್ನೂ ಇದೆ)





# ಮಕರದೇವತೆ

## ೧೭

[ಸಮುದ್ರಕೇತುವಿನ ಗುಂಪಿನೊಂದಿಗೆ ಶಿವದತ್ತ ಮೊದಲಾದವರು ಸ್ವಲ್ಪ ಹೊತ್ತು ಯುದ್ಧ ಮಾಡಿ, ಕಾಡಿನೊಳಗೆ ಓಡಿಹೋದರು. ಅಲ್ಲಿ ಅವರಿಗೆ ದೇವಮಾಯಿ ಎಂಬವಳು ಸಿಕ್ಕಿದಳು. ಅವಳಿಂದ ಶಿವದತ್ತಾದಿಗಳಿಗೆ ಮಕರ ಮಂಡಲದ ವೃತ್ತಾಂತವು ತಿಳಿಯಿತು. ಅವಳನ್ನು ಮುಂದಿಟ್ಟುಕೊಂಡು ಅವರೆಲ್ಲ ಹೊರಟರು. ನಿರ್ದಿಷ್ಟ ಪ್ರಾಂತ ಕಾಣಿಸಲು, ವಜ್ರಮುಷ್ಟಿ ಇಬ್ಬರು ಅನುಚರರೊಂದಿಗೆ ಮುಂದೆ ಹೋದನು.]

ಅಲ್ಲಿ ಸಮುದ್ರದ ನೀರು ಕಾಲುವೆಗಳ ಹಾಗೆ, ಸರೋವರಗಳಂತೆ, ನದಿಗಳ ರೂಪದಲ್ಲಿ, ಕೆಲವು ಕಡೆಹಳ್ಳಗಳಾಗಿಯೂ, ಕೊಳಗಳಾಗಿಯೂ ಕಾಣು ತಿತ್ತು. ನಡುನಡುವೆ ಕುದುರು ನೆಲಗಳು.

ಒಂದು ಉಪ್ಪುನೀರು ನದಿಯ ಆಚೆಯ ಬದಿಯಲ್ಲಿ ಏನೋ ಶಬ್ದಗಳೇಳುವುದನ್ನು ವಜ್ರಮುಷ್ಟಿ ಕೇಳಿ ದನು. ಅದು ವಿಕೃತವಾದ ಕೇಕಾರವದಂತಿತ್ತು. ವಜ್ರಮುಷ್ಟಿ ತನ್ನ ಅನುಚರರಕಡೆಗೆ ತಿರುಗಿ,

"ಅದು ಸಮುದ್ರ ಕೇತನ ಗುಂಪಿನವರ ಶಬ್ದವೇ ಆಗಿರಬೇಕು. ಒಂದು ವೇಳೆ ಅವರು ಬೇರೆಯಾರೋ ಆಗಿದ್ದರೂ, ಕುಡಿದು ಮೈಮರೆತು ಹೊರಳಾಡಿ ಕೊಂಡು ಹುಚ್ಚುಚ್ಚಾಗಿ ಕೂಗುತಿದ್ದಾರೆಂಬುದಕ್ಕೆ ಸಂಶಯವಿಲ್ಲ. ನೀವು ಇಲ್ಲೇ ನಿಲ್ಲಿರಿ. ನಾನು ಹೋಗಿ ಎಲ್ಲವನ್ನೂ ಸ್ಪಷ್ಟಪಡಿಸಿಕೊಂಡು ಬರುತ್ತೇನೆ" ಎಂದು ಹೇಳಿ ನೆಲದ ಮೇಲೆ ಮಲಗಿ ತೆವಳಿಕೊಂಡೇ ಮುಂದೆ ಮುಂದೆ ಹೋದನು. ನೀರಿನ ಬದಿಯಲ್ಲಿದ್ದ ಒಂದು ತೆಪ್ಪವು ಅವನ ಕೈಗೆ ಸಿಕ್ಕಿತು.

ಆ ತೆಪ್ಪದಲ್ಲಿ ಕುಳಿತು ವಜ್ರಮುಷ್ಟಿ ಸ್ವಲ್ಪ ಹೊತ್ತಿಗೆಲ್ಲಾ ಆಚೆಯ ತೀರವನ್ನು ಸೇರಿದನು. ಅವನು ತೆಪ್ಪವನ್ನು ಬದಿಯಲ್ಲಿದ್ದ ಮರಕ್ಕೆ ಕಟ್ಟಿ,



A




ಮತ್ತೆ ನೆಲಕ್ಕೆ ತಾಗಿ ತೆವಳುತ್ತಾ ಮುಂದೆ ಹೋದನು. ಸಮತಲವಾಗಿದ್ದ ಒಂದು ಸ್ಥಳದಲ್ಲಿ ಸುಮಾರು ಹತ್ತು, ಹನ್ನೆರಡು ಮಂದಿ ಚೋರ ಸಮುದ್ರ ಕೇತನ ಅನುಚರರು, ತಮ್ಮ ಆಯುಧಗಳನ್ನೆಲ್ಲ ಒಂದು ಕಡೆಯಲ್ಲಿ ರಾಶಿಯಾಗಿಟ್ಟು, ಮೈಮರೆಯುವ ಹಾಗೆ ಕುಡಿಯುತ್ತ, ಬಾಯಿಗೆ ಬಂದಹಾಗೆ ಕೂಗಾಡಿ ಕೊಂಡಿದ್ದರು. "ಆಹಾ ! ಇಷ್ಟು ಒಳ್ಳೆಯ ಸಂದರ್ಭ ಅವರೆಲ್ಲ ಬರುವವರೆಗೂ ಇರಬೇಕು !" ಅನಿಸಿತು ವಜ್ರಮುಷ್ಟಿಗೆ,

ಅವರನ್ನೆಲ್ಲಾ ಹತಮಾಡಲಿಕ್ಕೆ ತಾನೊಬ್ಬನೇ ಸಾಕೆಂದು ವಜ್ರಮುಷ್ಟಿಗೆ ತೋರಿತು. ಅವನು ಒಮ್ಮೆಗೇ ಪೊದರಿನ ಮರೆಯಿಂದ ಆಚೆಗೆ ಎಗರಿ, "ಜೈ ಕಾಲಕೇಯಾ !" ಎಂದು ಗರ್ಜನೆತೆಗೆದು ಕತ್ತಿಬೀಸುತ್ತ, ಯಾವುದೋ ಮೃಗದ ಹಾಗೆ ಕಳ್ಳರ ಮೇಲೆ ಹಾರಿದನು. ತಮ್ಮೆಲ್ಲರ ಮೇಲೆ ಎಂತಹ ಘೋರ ಆಪತ್ತು ಮುಗಿಬಿತ್ತೋ ಎಂದು ಕಳ್ಳರಲ್ಲಿ ಕೆಲವರಿಗಾದರೂ ತಿಳಿದು ಬರುವುದರೊಳಗೆ, ವಜ್ರಮುಷ್ಟಿಯ ಹರಿತವಾದ ಕತ್ತಿ ಅವರ ತಲೆಗಳನ್ನು ಮುಂಡದಿಂದ ಬೇರ್ಪಡಿಸಿಬಿಟ್ಟಿತು.

ಇಷ್ಟರಲ್ಲಿ ಎಚ್ಚರಕ್ಕೆ ಬಂದ ನಾಲ್ಕೈದು ಮಂದಿ ಭೀಕರವಾಗಿ ಅರಚುತ್ತ ತಮ್ಮ ಆಯುಧಗಳನ್ನು ಎತ್ತಿಕೊಳ್ಳುವುದರೊಳಗೆ, ವಜ್ರಮುಷ್ಟಿಯ ಮಿಂಚಿನ ವೇಗದ ಕತ್ತಿ ಅವರನ್ನು ಕೂಡಾ ಕಡೆಗಾಣಿಸಿಬಿಟ್ಟಿತು

ಕಡೆಗೆ ಒಬ್ಬನೇ ಒಬ್ಬನು ಮಾತ್ರ ಉಳಿದು ಆ ಗಲಾಟೆಯ ಮಧ್ಯದಿಂದ ಪಾರಾಗಿ ಉಪ್ಪು ನೀರು ನದಿಯಕಡೆಗೆ ಓಡುವುದನ್ನು ವಜ್ರಮುಷ್ಟಿ ನೋಡಿ ಬಿಟ್ಟನು. ಅವನನ್ನು ಓಡಲು ಬಿಟ್ಟರೆ ಇಷ್ಟೂ ಜನರನ್ನು ಕೊಂದು ಪ್ರಯೋಜನವಿಲ್ಲವೆನಿಸಿತು. ವಜ್ರಮುಷ್ಟಿಗೆ. ಅವನೊಬ್ಬ ಬದುಕಿ ಹೋಗಿಬಿಟ್ಟರೆ ತಮಗೆಲ್ಲರಿಗೂ ಮುಪ್ಪು ಬರುವುದೆಂದು ವಜ್ರ ಮುಷ್ಟಿಗೆ ಗೊತ್ತು.

ವಜ್ರಮುಷ್ಟಿ "ಜೈ ಕಾಲಕೇಯಾ !" ಎಂದು ಓಡಿ ಹೋಗುವ ಕಳ್ಳನ ಹಿಂದೆ ಓಡಿದನು. ನಿರಾಯು ಧನೂ, ಕುಡಿದ ಮತ್ತಿನಲ್ಲಿ ತಡಬಡಿಸುತ್ತಾ ಓಡು ತ್ತಿದ್ದ ಆ ಸಮುದ್ರಕಳ್ಳ, ಒಮ್ಮೆ ಹಿಂದಿರುಗಿ, ನರ ಮೃಗದಂತೆ ಭೀಕರಾಕಾರದಲ್ಲಿ ಓಡಿಬರುವ ವಜ್ರ ಮುಷ್ಟಿಯನ್ನು ನೋಡಿ "ಸತ್ತೆನಲ್ಲಾ !" ಎಂದು ಕೆಟ್ಟದನಿಯಿಂದ ಕೂಗಿ, ಒಮ್ಮೆಗೇ ಇದಿರಿನಲ್ಲಿದ್ದ ನದಿಯೊಳಗೆ ಧುಮುಕಿಬಿಟ್ಟನು. ಅದು ಎಂತಹ ನದಿಗುಂಡಿ ಎಂದು ಅವನಿಗೆ ತಿಳಿದಿದ್ದರೂ, ಯೋಚಿಸಲು ಅವಧಿಯಿಲ್ಲದೆ ಧುಮುಕಿದನೆಂದು ಮರುಕ್ಷಣದಲ್ಲೇ ಗೊತ್ತಾಯಿತು.

ವಜ್ರಮುಷ್ಟಿ ಕೂಡ ಅವನ ಹಿಂದೆಯೇ ಆ ಉಪ್ಪುನೀರ್ನದಿಯೊಳಗೆ ಧುಮುಕಲಿರುವಾಗ, ತಾಳೇ ಮರದ ದಿಂಡಿನ ಹಾಗೆ ಅಷ್ಟರವರೆಗೆ ನೀರಿನಲ್ಲಿ ತೇಲುತ್ತಿದ್ದ ಮೊಸಳೆಯೊಂದು, ಆ ಸಮುದ್ರಚೋರನ ಮೇಲೆ ಹಾರಿತು. ಕಣ್ಣು ಮುಚ್ಚಿ ಬಿಡಿಸುವ




ರೊಳಗೆ ಮೊಸಳೆ ಅವನನ್ನು ಬಾಯಿಯಲ್ಲಿ ಕಚ್ಚಿಕೊಂಡು, ನೀರಿನೊಳಗೆ ಎಳೆದುಕೊಂಡುಹೋಯಿತು.

ವಜ್ರಮುಷ್ಟಿ "ಅಹ್ಹಹ್ಹಾ!" ಎಂದು ಗಟ್ಟಿಯಾಗಿ ನಕ್ಕ. ಆ ಮೇಲೆ ಹಲ್ಲು ಕಡಿಯುತ್ತ, "ಸಮುದ್ರ ಕೇತನಿಗೆ ಕೂಡಾ ಇಂತಹ ಸಾವೇ ಬರಲಿದೆ ನನ್ನ ಕೈಯಲ್ಲಿ, ಅಲ್ಲದಿದ್ದರೆ ಮೊಸಳೆಯ ಬಾಯಿಯಲ್ಲಿ! ಜೈ ಕಾಲಕೇಯಾ!" ಎಂದು, ಅರಚಿದನು.

ಅಷ್ಟು ಹೊತ್ತಿಗೆ ವಜ್ರಮುಷ್ಟಿಯ ಹಿಂದೆ ಬಂದಿದ್ದ ಇಬ್ಬರು ಅನುಚರರೂ, ಆ ಉಪ್ಪುನೀರ್ನದಿಯ ತೀರಕ್ಕೆ ಬಂದು, ವಜ್ರಮುಷ್ಟಿಯ ಕಡೆಗೆ ಕೈಯಾಡಿಸಿದರು. ಇನ್ನು ತಡಮಾಡುವುದು ಒಳ್ಳೆಯದಲ್ಲವೆಂದುಕೊಂಡು ವಜ್ರಮುಷ್ಟಿ ತತ್‌ಕ್ಷಣವೇ ಒಂದು ತೆಪ್ಪದ ಮೇಲೆ ಹತ್ತಿ ಬೇಗಬೇಗನೆ ತೊಳಸಿಕೊಂಡು ಈಚೆಯ ತೀರಕ್ಕೆ ಬಂದನು.

ವಜ್ರಮುಷ್ಟಿ ಒಬ್ಬಂಟಿಗನಾಗಿ ಅಷ್ಟು ಮಂದಿ ಶತ್ರುಗಳನ್ನು ಸಂಹಾರ ಮಾಡಿದುದನ್ನು ನೋಡಿ, ಅನುಚರರಿಬ್ಬರೂ ಅವನ ಧೈರ್ಯಸಾಹಸ ಚಮತ್ಕಾರ ವೇಗಗಳನ್ನು ಸಾವಿರಬಾಯಿಯಲ್ಲಿ ಮೆಚ್ಚಿದರು. ತರುವಾಯ ಎಲ್ಲರೂ ಕೂಡಿ ಶಿವದತ್ತನಿರುವಲ್ಲಿಗೆ ಹೊರಟರು.

ವಜ್ರಮುಷ್ಟಿಯನ್ನು ಅಷ್ಟು ದೂರದಿಂದ ನೋಡುತ್ತಲೇ ಶಿವದತ್ತನು ಇದಿರಾಗಿ ಬಂದು, "ಹೋದ ಕಾರ್ಯವೇನಾಯಿತು? ಸಮುದ್ರಚೋರನ ಕಡೆಯವರು ಆ ಪ್ರಾಂತದಲ್ಲೆಲ್ಲಿಯೂ ಇಲ್ಲವಷ್ಟೆ?" ಎಂದು ಪ್ರಶ್ನಿಸಿದನು.

ವಜ್ರಮುಷ್ಟಿ ನಡೆದ ಸಮಾಚಾರವನ್ನು ಹಗುರಾಗಿ ತೇಲಿಸಿ ಹೇಳುವುದನ್ನು ನೋಡಿ, ಅವನು ತನ್ನ ಪರಾಕ್ರಮವನ್ನು ಹೇಳಲು ಭಿಡೆಗೊಳ್ಳುವನೆಂದು ತಿಳಿದು, ಸೈನಿಕರಿಬ್ಬರೂ ಅವನು ಮಾಡಿದ ಸಾಹಸಕಾರ್ಯವನ್ನು ಶಿವದ[illegible] ಮಂದರದೇವರೊಂದಿಗೆ ಹೇಳಿದರು. ವಜ್ರಮುಷ್ಟಿಯ ಅಸಾಮಾನ್ಯವಾದ ಧೈರ್ಯ ಸಾಹಸಗಳಿಗೆ ಅವರು ಆಶ್ಚರ್ಯಪಟ್ಟರು.

"ವಜ್ರಮುಷ್ಟೀ. ನಿಜಕ್ಕೂ ನಿನ್ನ ಸಾಹಾಸವು ಕೊಂಡಾಡ ತಕ್ಕದ್ದು. ನೀನು ಈ ಮೊದಲು ಹೇಳಿದ ಕಾರ್ಯಕ್ಕೆ ಸಂದರ್ಭಬಂದರೆ ಸಮುದ್ರಕೇತನನ್ನು ನಾನು ಕೊಲ್ಲುವ ಹಾಗೆ ಬಂದರೂ ಆ ಕೆಲಸ ನಿನಗೇ ಬಿಡುತ್ತೇನೆ!" ಎಂದು ಉತ್ಸಾಹದಿಂದ ಹೇಳಿದನು ಶಿವದತ್ತ.

ಸಮುದ್ರ ಕೇತನ ಹೆಸರು ಕೇಳಿದ ಕೂಡಲೇ ದೇವಮಾಯಿ ಕೋಪೋದ್ರಿಕ್ತಳಾಗಿ, ತನ್ನ ಉದ್ರಿಕ್ತತೆಯನ್ನು ನುಂಗಿಕೊಂಡು, "ಅಯ್ಯಾ, ವಜ್ರಮುಷ್ಟಿಯ ಕತ್ತಿಯ ಪೆಟ್ಟಿಗೆ ಬಲಿಯಾದವರು ಆ ದುಷ್ಟನ ಕಡೆಯ ಕಳ್ಳ ಗುಂಪಿನವರೆಂದು ನನಗೆ ತೋರುವುದಿಲ್ಲ. ಅವರು ಈ ಪ್ರಾಂತದ ನಾಯಕನು ಕಾವಲಿಗೆ ಇಡಿಸಿದವರಾಗಿರಬಹುದು. ಆದ್ದರಿಂದ ಈಗ ನಾವು ಯಾರ




ಕಣ್ಣಿಗೂ ಬೀಳದಂತೆ, ಅವನ ನಿವಾಸ ಸ್ಥಳಕ್ಕೆ ತಲಪಿ ಬಿಡಬಹುದು. ಇಲ್ಲಿಗೆ ಸುಮಾರು ನಾಲ್ಕೈದು ಕ್ರೋಶ ದೂರದಲ್ಲಿ ಅವನ ಸ್ಥಾನವಿದೆ. ಅಲ್ಲಿಗೆ ನಾವು ಹೋಗಿ ಸೇರಬೇಕಾದರೆ ದೋಣಿಗಳ ಮೂಲಕವೇ ಹೋಗಬೇಕು! ಮೊದಲು ದೋಣಿಗಳನ್ನು ಸಂಪಾದಿಸಬೇಕು" ಎಂದಳು.

"ಸಮುದ್ರಕೇತನು ಇರುವುದು ದೊಡ್ಡ ದುರ್ಗದೊಳಗೇನು? ಆ ದುರ್ಗದ ರಚನೆ ಯಾವರೀತಿಯದೋ?" ಎಂದು ಶಿವದತ್ತನು ಸಂಶಯ ವ್ಯಕ್ತ ಪಡಿಸಿದನು.

ಅದಕ್ಕೆ ದೇವಮಾಯಿ, "ದುರ್ಗದಂತಹ ಕೋಟೆ ಕಟ್ಟೋಣ, ಸೌಧಗಳಂತಹವಾವುದೂ ಇಲ್ಲ. ಆ ಪ್ರದೇಶವಷ್ಟೂ ಸಮುದ್ರಜಲದಿಂದ ಸುತ್ತಿಕೊಂಡಿದೆ, ಅಲ್ಲಲ್ಲಿ ಎತ್ತರವಾದ ಭೂಪ್ರದೇಶಗಳಿವೆ. ಅವನಿರುವ ಸ್ಥಳವು ಅಂತಹದರಲ್ಲಿ ಒಂದು. ಸುತ್ತಲೂ ಇರುವ ಉಪ್ಪು ನೀರಿನ ಆವರಣವೇ ಅವನ ರಕ್ಷೆ. ಯಾವ ಕಡೆಯಿಂದ ಶತ್ರುಗಳು ಬಂದರೂ ಅವನಿಗೆ ಗೊತ್ತಾಗಿ ಬಿಡುತ್ತದೆ. ಅಷ್ಟು ಭದ್ರದ ಸ್ಥಳವದು" ಎಂದಳು.

"ಅವನ ಕಡೆಯ ಕಳ್ಳಬಂಟರು ಬಹಳಮಂದಿ ಇರಬಹುದು ಅಲ್ಲವೆ?" ಎಂದು ಶಿವದತ್ತನು ಕೇಳಿದನು.

"ಅನುಚರರಿಗೇನೂ ಕಡಿಮೆಯಿಲ್ಲ. ಅನೇಕರಿದ್ದಾರೆ. ಆದರೆ ಅವರನ್ನೆಲ್ಲ ಮೀರಿಸುವಷ್ಟು ಹೆಚ್ಚು ಮಂದಿ ಗುಲಾಮರು ಬಂಧನದಲ್ಲಿ ನರಳಿಕೊಂಡಿದ್ದಾರೆ. ನಮ್ಮ ಕಳ್ಳ ಶತ್ರುಗಳೂ ಇರುವುದು ಅಲ್ಲಿಯೇ, ನಾನು ಬಹಳಕಾಲ ಅಲ್ಲಿಯೇ ಬಂಧಿಸಲ್ಪಟ್ಟಿದ್ದವಳು. ಅದು ಹೋಗಲಿ. ಈಗ ಮೊದಲು ನಾವು ಆ ಗುಲಾಮರು ಬಂಧಿಸಲ್ಪಟ್ಟಿರುವ ಕೊಟ್ಟಿಗೆಗಳ ಬಳಿಗೆ ಹೋಗಿ, ಅವರನ್ನೆಲ್ಲ ಬಂಧಮುಕ್ತಗೊಳಿಸಲು ಸಾಧ್ಯವಾದರೆ, ಆ ಮೇಲೆ ನಮ್ಮ ಅಗತ್ಯವೇ ನಿಲ್ಲದೆ, ಆ ರೋಷ ಕಷಾಯಿತರಾದ ಗುಲಾಮರೇ ಸಮುದ್ರಕೇತನನ್ನೂ, ಅವನ ಅನುಚರರನ್ನೂ ಕೊನೆಗೊಳಿಸಿ ಬಿಡಬಿಲ್ಲರು. ಅಷ್ಟು ಹಿಂಸೆ ಪಡಿಸಿದವನು ಕಾಲಕೇತ" ಎಂದಳು ದೇವಮಾಯಿ ಉದ್ರೇಕಿತಳಾಗಿ.

"ಆ ಗುಲಾಮರ ಸಂಖ್ಯೆ ಸುಮಾರು ಎಷ್ಟಿದ್ದೀತು?" ಎಂದು ಶಿವದತ್ತನು ಕೇಳಿದನು.

"ಐದಾರು ನೂರು ಜನರಿಗಿಂತ ಕಡಿಮೆಯಂತೂ ಅಲ್ಲ." ಎಂದಳು ದೇವಮಾಯಿ.

"ಹಾಗಾದರೆ ನಾವೀಗ ಅಲ್ಲಿಗೆ ಹೊರಡುವ, ವಜ್ರಮುಷ್ಟಿ ಸಂಪಾದಿಸಿದ ಚಿಕ್ಕ ದೋಣಿಗಳ, ಸಹಾಯದಿಂದ, ಆಳವಷ್ಟೇನಿಲ್ಲದ ಈ ಉಪ್ಪು ನೀರ್ನದಿಗಳನ್ನು ದಾಟಿಕೊಂಡು, ನಾವೆಲ್ಲಾ ಆ ಸಮುದ್ರಕೇತನ ಲಯಕಾರ್ಯಕ್ಕೆ ಹೋಗಿ ಸೇರಿ ಬಿಡಬಹುದು. ಕತ್ತಲೆಯಾಗುತ್ತಾ ಇದೆ. ಶತ್ರುಗಳು ಮೋಸ ಹೋಗುವ ರೀತಿಯಲ್ಲಿ ಇದಿರಿಸಿ ಹತಾಹತ ಮಾಡಲು ಇದೇ ತಕ್ಕ ಸಮಯ!" ಎಂದು ಶಿವದತ್ತನು ಎಲ್ಲರಿಗೂ ಹೊರಡಲು ಸಂಜ್ಞೆ ಮಾಡಿದನು.

ಎಲ್ಲರೂ ಉಪ್ಪುನೀರ್ನದಿಯ ಬಳಿಗೆ ಹೊರಟರು. ಸ್ವಲ್ಪ ಹೊತ್ತಿಗೆ ಅವರು ಸೇರಿದ ಸ್ಥಳವು ಸುತ್ತಲೂ ಜಲಮಯವಾಗಿ. ಅಲ್ಲಲ್ಲಿ ಮಿಟ್ಟೆ ಪ್ರದೇಶದಲ್ಲಿ ಹಸಿರು ಮುರಿಯುವ ಮರಗಳಿಂದ ಕೂಡಿದ್ದಿತು. ಸಮುದ್ರಚೋರರು ಬಿಟ್ಟಿದ್ದ ಕೆಲವು ದೋಣಿಗಳು ಮರಗಳಿಗೆ ಕಟ್ಟಿ ನಿಲ್ಲಿಸಲಾಗಿದ್ದುವು. ಅವರೆಲ್ಲ ಆ ದೋಣಿಗಳಲ್ಲಿ ಕುಳಿತು ದೇವಮಾಯಿ ತೋರಿಸುವ ದಿಕ್ಕಿಗೆ ದೋಣಿಗಳನ್ನು ಸಾಗಿಸಿಕೊಂಡು ಹೊರಟರು.

ಅಷ್ಟು ಹೊತ್ತಿಗೆ ಚೆನ್ನಾಗಿ ಕತ್ತಲೆ ಮುಸುಕಿತು. ಚಂದ್ರನು ಎಲ್ಲಿಯೋ ಮೇಘಗಳ ಮರೆಯಲ್ಲಿ, ಮಸಮಸಕಾಗಿ ಹೋಗಿದ್ದನು. ಅಲ್ಲಿಗೆ ಬಹಳ ದೂರದಲ್ಲಿ ಸಮುದ್ರಕೇತನ ನಿವಾಸಸ್ಥಾನವಿರುವ ಚಿಕ್ಕ ದ್ವೀಪ ಖಂಡವು ಮಿನುಕು ಮಿನುಕಾಗಿ ಬೆಳಗುವ ದೀವಿಟಿಗೆಗಳ ಕಾಂತಿ ಹೊರತು, ಸುತ್ತಲೂ ಭೀತಿ ಹುಟ್ಟಿಸುವ ಗಾಢಾಂಧಕಾರವೇ.

ಆ ಕಗ್ಗನುಗತ್ತಲೆಯಲ್ಲಿ ಒಬ್ಬರಿಗೊಬ್ಬರು ಎಚ್ಚರಿಕೆ ಹೇಳಿಕೊಳ್ಳುತ್ತ, ದೋಣಿಗಳು ಒಂದಕ್ಕೊಂದು ತಾಗಿ ಅಡಿ ಮೇಲಾಗದಂತೆ ನೋಡಿಕೊಳ್ಳುತ್ತ, ಶಿವದತ್ತಾದಿಗಳು ಮುಂದೆ ಮುಂದೆ ಸಾಗುತ್ತಿದ್ದರು. ದಾರಿಯಲ್ಲಿ ಅಲ್ಲಲ್ಲಿರುವ, ಮಿಟ್ಟೆ ಪ್ರದೇಶಗಳಲ್ಲಿದ್ದ ಮರಗಳ ಕಡೆಯಿಂದ ನೀರು ಹಕ್ಕಿಗಳ ವಿಕೃತ ಧ್ವನಿಗಳು ಕೇಳುತ್ತಿದ್ದುವು. ರೆಕ್ಕೆಗಳ ಫಡಫಡಗಳೂ ಹೊರಡುತ್ತಿದ್ದುವು. ನೀರಿನಲ್ಲಿ ಆಹಾರ ಸಂಪಾದನೆಗೆ ತಿರುಗಾಡಿಕೊಂಡಿದ್ದ ಮೊಸಳೆಗಳು, ಇತರ ಕ್ರೂರ ಜಲಚರಗಳು ದೋಣಿಗಳವರೆಗೂ ಬಂದು, ಅವುಗಳಲ್ಲಿ ಮನುಷ್ಯರ ಶಬ್ದ ಕೇಳಿದ ಕೂಡಲೇ ಹೆದರಿ ದೂರದೂರ ಓಡಿ ಹೋಗಿ ಬಿಡುತ್ತಿದ್ದುವು.

ಸುಮಾರು ಮಧ್ಯ ರಾತ್ರಿಯ ಹೊತ್ತಿಗೆ ಶಿವದತ್ತನು ತನ್ನ ಅನುಚರರೊಂದಿಗೆ ಸಮುದ್ರಕೇತನು ವಾಸಮಾಡುವ ಮಿಟ್ಟೆ ಪ್ರಾಂತದ ಹತ್ತಿರ ಸೇರಿದನು.



ಈಗ ಮಾಡಬೇಕಾದ ಮೊದಲನೇ ಕೆಲಸ, ಪಶುಗಳ ಹಾಗೆ ಕೊಟ್ಟಿಗೆಯಲ್ಲಿ ಗೂಟಕ್ಕೆ ಕಟ್ಟಲ್ಪಟ್ಟ ಗುಲಾಮರನ್ನು ಮುಕ್ತಗೊಳಿಸುವುದು, ಇದು ಸಪ್ಪಳಿಲ್ಲದೆ ನಡೆಯ ಬೇಕಾದ ಕೆಲಸ. ಆ ಮೇಲೆ ಅವರ ಸಹಾಯದಿಂದ ಸಮುದ್ರಕೇತನನ್ನು ಸಪರಿವಾರವಾಗಿ ಹತ ಮಾಡಬೇಕು.

ಶಿವದತ್ತನು ಹೀಗೆ ಭಾವಿಸಿಕೊಂಡಿರುವಾಗಲೇ ತಲಪಬೇಕಾದ ತೀರ ಪ್ರದೇಶವು ತಾಗಿತು. ಇನ್ನು ದೋಣಿಗಳು ಮುಂದುವರಿಯಲಾರವು. ಎಲ್ಲರೂ ದೋಣಿಗಳಿಂದ ಇಳಿದು ಸಪ್ಪಳಾಗದಂತೆ ಕಾಲೆಳೆದುಕೊಂಡು ತೀರವನ್ನು ಸೇರಿದರು. ತರುವಾಯ, ಮರಗಳ ಮರೆಯಿಂದಾಗಿ ತಗ್ಗೀಬಗ್ಗೀ ತೆವಳೀ ಸ್ವಲ್ಪದೂರ ಹೋಗುವಷ್ಟರಲ್ಲಿ, ಆ ಪ್ರಾಂತವನ್ನೆಲ್ಲಾ ಹಚ್ಚ ಹಗಲಿನಂತೆ ಬೆಳಗಿಸುವ ಅನೇಕ ನೂರು ದೀವಟಿಗೆಗಳ ಕಾಂತಿ ಅವರ ಮುಂದೆ ಪ್ರತ್ಯಕ್ಷವಾಯಿತು. ಈ ಕಾಂತಿಯ ಗುರಿ ಓಡಿದು



ಕೊಂಡೇ ಅವರೆಲ್ಲ ಅಲ್ಲಿಗೆ ಬಂದುದಾಗಿತ್ತು. ಶಿವದತ್ತನು ಕೂಡಲೇ ಆ ಬೆಳಕು ಪಸರಿಸದಿರುವ ಮರಗಳ ಗುಂಪಿನೊಳಗೆ ಸೇರಿ, ತನ್ನ ಅನುಚರರನ್ನೂ ಸಂಜ್ಞೆಯಿಂದ ತನ್ನ ಬಳಿಗೆ ಕರೆದುಕೊಂಡನು.

ಎಲ್ಲರೂ ಮರಗಳ ಮರೆಯಲ್ಲಿ ಅಡಗಿಕೊಂಡು ದೀವಿಟಿಗೆಗಳ ಪ್ರಕಾಶವಿರುವ ಸ್ಥಳವನ್ನು ನೋಡಿದರು. ಅಲ್ಲಿ ಸುಮಾರು ನಲುವತ್ತು ಐವತ್ತುಮಂದಿ ಕಟ್ಟಾಳುಗಳಾದ ಸಮುದ್ರಚೋರರು ಸೇರಿದ್ದರು. ಕೆಲವರು ನಿಂತಿದ್ದರೆ ಮತ್ತೆ ಕೆಲವರು ಕುಳಿತಿದ್ದರು. ಕೆಲವರು ಕಾಲಾಡಿಸಿಕೊಂಡು ಏನೋ ಗುಸುಗುಟ್ಟಿಕೊಂಡಿದ್ದರು. ಸಮುದ್ರ ಕೇತನು ಕೈಯಲ್ಲಿ ಪಾನಪಾತ್ರವನ್ನು ಹಿಡಿದುಕೊಂಡು ಮಧ್ಯೆ ಮಧ್ಯೆ ಮದ್ಯವನ್ನು ಸೇವಿಸುತ್ತ, ಕವಚಧಾರಿಗಳಾದ ನಾಲ್ಕೈದು ಮಂದಿ ವ್ಯಕ್ತಿಗಳೊಂದಿಗೆ ರಹಸ್ಯವಾಗಿ ಏನೋ ಮಾತಾಡಿಕೊಂಡಿದ್ದನು.

ದೇವಮಾಯಿ ತನ್ನ ತೋರು ಬೆರಳನ್ನು ಅವರ ಕಡೆಗೆ ನೀಡಿ, "ಆ ಕವಚಧಾರಿಗಳು ನಾಲ್ವರೂ ಮಕರ ಮಂಡಲದ ರಾಜನಾದ ಹರಿಶಿಖನ ಸೈನಿಕರು. ಬೆಳಗಾದರೆ ಮಕರದೇವತೆಗೆ ಬೇಕಾದ ಆಹಾರದ ಬಲಿಯನ್ನು ಸಂಪಾದಿಸಲು ಇಲ್ಲಿಗೆ ಬಂದಿದ್ದಾರೆ. ಸಮುದ್ರ ಕೇತನು ಬಂಧಿಸಿ ತಂದವರಲ್ಲಿ ಆರೋಗ್ಯವಂತರಾಗಿದ್ದ, ಗಟ್ಟಿಮುಟ್ಟ ಯುವಕರಿಗೆ ಎಷ್ಟು ಬೆಲೆಯಾದರೂ ಕೊಟ್ಟುಕೊಂಡುಕೊಂಡು ತಮ್ಮ ಮಕರ ಮಂಡಲಕ್ಕೆ ಒಯ್ದು ಬಿಡುತ್ತಾರೆ. ಈಗ ನಡೆಯುವುದು ಅಂತಹ ವ್ಯಾಪಾರವೇ !" ಎಂದಳು.

ಅವಳು ಹೇಳಿದುದನ್ನು ಕೇಳಿ ಶಿವದತ್ತನು ಆಶ್ಚರ್ಯ ಪಡುತ್ತ, "ಮಕರ ದೇವತೆಗೆ ಆಹಾರ ಹಾಕುವುದಕ್ಕೆ ಮಾನವರ ಹೊರತು ಪ್ರಾಣಿಗಳಾವುದೂ ಉಪಯೋಗಕ್ಕೆ ಬಾರವೇ ? ಇಷ್ಟೊಂದು ಬೆಲೆತೆತ್ತು ಮನುಷ್ಯರೇ ಆಗಬೇಕೆಂದೇನಿದೆ ? ಇದು ಬಹಳ ವಿಚಿತ್ರವೇ!" ಎಂದು ಕೇಳಿದನು.

"ಮಕರ ಮಂಡಲದ ಪ್ರಜೆಗಳೆಲ್ಲರೂ ಅದನ್ನು ದೇವತೆಯ ಅವತಾರವೆಂದೇ ನೋಡುತ್ತಾರೆ. ಯಾವುದೋ ಕ್ಷುದ್ರ ದೇವತೆಗಳು ಇದ್ದಾವಷ್ಟೆ ? ಹಾಗೆಯೇ ಇದೂ ಒಂದು ಎಂದು ತಿಳಿದುಕೊಳ್ಳಿ. ಈ ಮಕರದೇವತೆ ಎಂದರೆ ಪ್ರಜೆಗಳಿಗೆಲ್ಲಾ ಮಹಾ ಭಯ. ಅದಕ್ಕೆ ಪ್ರಾಣಿಗಳನ್ನು ಬಲಿ ಕೊಡುವುದೆಂದರೆ ಅದೊಂದು ಅಪಚಾರವೆಂದೇ ಭಾವಿಸುತ್ತಾರೆ ಅಲ್ಲಿಯ ಪ್ರಜೆಗಳು, ಹಾಗೆ ಮಾತಾಡುವುದೇ ದೊಡ್ಡ ತಪ್ಪು! ರಾಜನೇನು ಮಾಡುವನು ? ಪ್ರಜೆಗಳ ಇಷ್ಟದಂತೆ ನಡೆಸದಿದ್ದರೆ ದಂಗೆ ಏಳುತ್ತಾರೆ" ಎಂದಳು ದೇವಮಾಯಿ.

"ಒಂದುವೇಳೆ ಆ ಮೂಢರು ಭಾವಿಸುವುದೇ ನಿಜವಾದರೆ ಆ ಕ್ಷುದ್ರದೇವತೆಯ ಪಾಲಿನ ಯಮನೊಬ್ಬ ನಮ್ಮಲ್ಲೇ ಇದ್ದಾನೆ" ಎಂದು ಶಿವದತ್ತನು ವಜ್ರಮುಷ್ಟಿಯನ್ನು ತೋರಿಸಿ ನಕ್ಕನು.

"ನಾನು ಆ ಮಕರ ದೇವತೆಗೆ ಮಾತ್ರವಲ್ಲ, ಈ ಕ್ರೂರ ಸಮುದ್ರ ಕೇತನ ಪಾಲಿಗೆ ಕೂಡಾ ಕಾಲಯಮ!" ಎಂದು ವಜ್ರಮುಷ್ಟಿ ಕೋಪದಿಂದ ಮುಷ್ಟಿಬಿಗಿದು ಹಲ್ಲುಕಡಿದನು.

"ಸರಿ. ಇನ್ನು ನಾವು ಒಂದಿಷ್ಟೂ ಶಬ್ದಮಾಡದೆ ಹೋಗಿ ಗುಲಾಮರ ಬಂಧಮುಕ್ತ ಮಾಡೋಣ. ಒಂದು ವೇಳೆ ನಾವು ಆ ಕಾರ್ಯದಲ್ಲಿ ವಿಫಲರಾಗಿ ಹೋದರೆ, ನಾವು ಬಂದ ದೋಣಿಗಳು ಇಲ್ಲಿಯೇ ಇವೆ. ಅವುಗಳ ಸಹಾಯದಿಂದ ತಪ್ಪಿಸಿಕೊಂಡು ಓಡಿಬಿಡುವ ಎಚ್ಚರಿಕೆಯೂ ನಮಗಿದ್ದರಾಯಿತು!" ಎಂದನು ಶಿವದತ್ತ.

ದೇವಮಾಯಿ ದೊಡ್ಡದಾಗಿ ಕಾಣುವ ಬಂಧನದ ಕೊಟ್ಟಿಗೆ ಸಾಲೆಯ ಕಡೆಗೆ ದಾರಿತೋರಿಸುತ್ತಾ ನಡೆದಳು. ಎಲ್ಲರೂ ಮರಗಳ ಮರೆಯಲ್ಲಿ ಅಡಗಿಕೊಂಡೇ ಆ ಕಡೆಗೆ ನಡೆದರು. ಸ್ವಲ್ಪಹೊತ್ತಿಗೆ ಅವರು ಪಶುಗಳ ಶಾಲೆಯಂತಿರುವ ವಿಸ್ತಾರವಾದ ಆ ಕೊಟ್ಟಿಗೆಗಳ ಜಾಗಕ್ಕೆ ಮುಟ್ಟಿದರು. ಅದರೊಳಗೆ ಪಶುಗಳ ಹಾಗೆ ದೊಡ್ಡದೊಡ್ಡ ಗೂಟಗಳಿಗೆ, ಸಾಲಾಗಿ ಸಂಕಲೆಗಳಿಂದ ಕೈಕಾಲುಗಳನ್ನು ಬಂಧಿಸಿದ ಮನುಷ್ಯರಿರುವುದನ್ನು ನೋಡಿದರು.

ಶಿವದತ್ತನು ತನ್ನ ಅನುಚರರಿಗೆ ಎಚ್ಚರಿಕೆಯ ಸಂಜ್ಞೆ ಮಾಡಿ, ಮೆಲ್ಲನೆ ಆ ಕೊಟ್ಟಿಗೆಯೊಳಗೆ ಪ್ರವೇಶಿಸಿದನು. ತೀರಾ ಸೋತವರಂತಿರುವ ಬಂಧಿತರ ಬಳಿಗೆ ಮೊದಲು ವಜ್ರಮುಷ್ಟಿ ಹೋಗಿ, ಪ್ರತಿಯೊಬ್ಬನ ಕಿವಿಯಲ್ಲಿಯೂ ತಾವು ಬಂದ ಕಾರ್ಯವನ್ನು ಹೇಳಿ ಎಲ್ಲರೂ ನಿಶಬ್ದವಾಗಿರಬೇಕೆಂದು ಎಚ್ಚರಿಕೆ ಕೊಟ್ಟನು.

ಶಿವದತ್ತನೂ ಅವನ ಅನುಚರರೂ ತಮ್ಮ ಹತ್ತಿರವಿದ್ದ ಆಯುಧಗಳಿಂದ ಮೊದಲು ಕೆಲವು ಮಂದಿ ಗುಲಾಮರನ್ನು ಬಂಧಮುಕ್ತರನ್ನಾಗಿ ಮಾಡಿದರು. ಹಾಗೆ ಬಂಧಮುಕ್ತರಾದ ಗುಲಾಮರು



ಬೇಗದಲ್ಲೇ ತಮ್ಮ ಹಾಗಿದ್ದವರೆಲ್ಲರನ್ನೂ ಬಂಧನದಿಂದ ಬಿಡುಗಡೆಗೊಳಿಸಿದರು. ಅವರ ಸಂತೋಷಕ್ಕೆ ಪಾರವಿಲ್ಲ.

ಈವಿಧವಾಗಿ ಸ್ವಲ್ಪ ಹೊತ್ತಿನೊಳಗೆ ಆ ಪ್ರಾಂತದಲ್ಲಿದ್ದ ಕೊಟ್ಟಿಗೆಗಳಲ್ಲಿ ಕಟ್ಟಲ್ಪಟ್ಟವರೆಲ್ಲರೂ ಬಿಡುಗಡೆಯಾದರು.

ಆದರೆ ಸ್ವಯಂಪ್ರಭೆ ಎಲ್ಲಿ? ಈ ಪ್ರಶ್ನೆ ದೇವಮಾಯಿಯನ್ನೂ, ಮಂದರದೇವನನ್ನೂ ಮೊದಲಿನಿಂದಲೂ ಕಾಡಿಕೊಂಡೇ ಇದ್ದಿತು. ಅವರು ಅನೇಕ ಗುಲಾಮರೊಂದಿಗೆ ಕೇಳಿ ನೋಡಿದರು, ಅವರಾರಿಗೂ ಅವಳನ್ನು ಕುರಿತು ತಿಳಿಯದು. ಸ್ವಯಂಪ್ರಭೆಯನ್ನು ಇಷ್ಟರೊಳಗೆ ಮಕರದೇವತೆಯ ಹೊಟ್ಟೆಗೆ ದೂಡಿಬಿಟ್ಟರೇನೋ ಎಂದು ಅವರು ಹೆದರಿದರು. ಅಷ್ಟರಲ್ಲಿ ಒಬ್ಬ ಗುಲಾಮನು ಮುಂದೆ ಬಂದು, "ಅಯ್ಯಾ, ಸ್ವಲ್ಪ ಮೊದಲು ಕಾವಲುಗಾರರು, ಒಬ್ಬಳು ಮಹಾ ಸುಂದರಿ ಹುಡುಗಿ

ಸಿಕ್ಕಿದ್ದಾಳೆಂದೂ, ಅವಳನ್ನು ಸಮುದ್ರಕೇತನು ಭಾರೀ ಬೆಲೆಗೆ ಯಾರಿಗೋ ಮಾರಲಿದ್ದಾನೆಂದೂ ಮಾತಾಡಿ ಕೊಳ್ಳುವುದನ್ನು ಕೇಳಿದೆ" ಎಂದನು.

ಈ ವಾರ್ತೆ ಕೇಳಿ ದೇವಮಾಯಿಗೂ ಇತರರಿಗೂ ಸ್ವಲ್ಪ ಸಮಾಧಾನವೆನಿಸಿತು. ಮಂದರದೇವನು ಶಿವದತ್ತನ ಬಳಿಗೆ ಬಂದು, "ಶಿವದತ್ತಾ, ಇಲ್ಲಿ ಇಷ್ಟು ಮಂದಿ ಗುಲಾಮರಿರುವರಷ್ಟೆ? ಇವರಿಗೆ ಕಾವಲು ಗೀವಲು ಅಂತ ಏನೂ ಇಲ್ಲದಿರುವುದು ಒಂದು ಆಶ್ಚರ್ಯವಲ್ಲವೆ?" ಎಂದನು.

ಶಿವದತ್ತನು ಆ ಪ್ರಶ್ನೆಗೆ ನಕ್ಕು, "ಈ ಸಮುದ್ರ ಜಲದ ನಡುವಿನಲ್ಲಿರುವ ಮಿಟ್ಟೆ ಪ್ರದೇಶದಲ್ಲಿ ಕಬ್ಬಿಣದ ಸಂಕಲೆಗಳಿಂದ ಕೈಕಾಲು ಕಟ್ಟಲ್ಪಟ್ಟವರು ಎಲ್ಲಿಗೆ ತಾನೇ ಹೋಗಲು ಸಾಧ್ಯ? ಕಾವಲು ಏಕೆ ದಂಡಕ್ಕೆ? ಅದಿರಲಿ, ಪ್ರಸ್ತುತ ಕಾರ್ಯವನ್ನು ಆಲೋಚಿಸೋಣ. ಸ್ವಯಂಪ್ರಭೆ ಈ ಪ್ರಾಂತದಲ್ಲೆ ಲ್ಲಿಯೋ ಇರಬಹುದೆಂದುಕೊಳ್ಳೋಣ. ನಾವು ಎಲ್ಲರೂ ಒಂದೇ ಬಾರಿಗೆ ಸಮುದ್ರಕೇತನ ಮೇಲೆ ಬಿದ್ದು, ಅವನನ್ನು ಅವನ ಪರಿವಾರದೊಂದಿಗೇ ಸರ್ವನಾಶ ಮಾಡಿಬಿಡೋಣ. ಯಾರನ್ನೂ ತಪ್ಪಲು ಬಿಡಬಾರದು" ಎಂದನು.

ಇಷ್ಟರಲ್ಲಿ ವಜ್ರಮುಷ್ಟಿ ಎಲ್ಲಾ ಗುಲಾಮರನ್ನೂ ಒಂದು ಕಡೆಯಲ್ಲಿ ಸೇರಿಸಿ, ಅವರಿಗೆ ಕೋಲು, ಕಟ್ಟಿಗೆ, ದೊಣ್ಣೆ, ಸಂಕಲೆ, ಗಢಾರೆ, ಹಾರೆ, ಈ ವಿಧವಾಗಿ ಕೈಗೆ ಏನು ಸಿಕ್ಕಿತೋ ಅದನ್ನು ಕೊಡಿಸಿ ಸರ್ವಸನ್ನದ್ಧರಾಗುವಂತೆ ಮಾಡಿದನು. ಶಿವದತ್ತನ ಆಜ್ಞೆಯಾದ ಕೂಡಲೇ ತಯಾರಾದ ಹೊಸ ಸೇನೆಯನ್ನು ಮೂರು ವಿಭಾಗ ಮಾಡಿದರು. ಶಿವದತ್ತನೂ, ಮಂದರದೇವನೂ, ವಜ್ರಮುಷ್ಟಿಯೂ ಆ ಮೂರು ವಿಭಾಗಗಳಿಗೂ ಮುಂದಿದ್ದು ದಾಳಿ ಪ್ರಾರಂಭಿಸಬೇಕೆಂದು ನಿರ್ಣಯಿ ಸಲ್ಪಟ್ಟಿತು.

ಎಲ್ಲರೂ ಮರಗಳ ಮರೆಯಲ್ಲಿಯೇ, ಕತ್ತಲೆ ಯೊಳಗಿಂದಾಗಿಯೇ, ಶಬ್ದವಿಲ್ಲದೆ ನಡೆದು, ಒಂದೇ ಸಾರಿ ಮೂರು ದಿಕ್ಕುಗಳಿಂದ, ಭೀಕರವಾಗಿ ಬೊಬ್ಬಿರಿಯುತ್ತ, ಸಮುದ್ರಕೇತನ ಮೇಲೆ ಧುಮುಕಿದರು.

ಇಷ್ಟೊಂದು ಆಕಸ್ಮಿಕವಾಗಿ ತಮ್ಮ ಮೇಲೆ ಹಾರಿ ಬೀಳುವ ಶತ್ರುಗಳು ಯಾರು ಏನೆಂಬುದನ್ನು ತಿಳಿದುಕೊಂಡು, ಪ್ರತಿಭಟಿಸಲು ಸಾಧ್ಯವಾಗು ವುದಕ್ಕೂ ಸಮಯವಿರಲಿಲ್ಲ. ಅವರೆಲ್ಲ ಕೈಯಾಡಿಸು ವುದರೊಳಗೆ ಕಳ್ಳರ ಗುಂಪಿನ ಅನೇಕಮಂದಿ ಶಿವದತ್ತನ ಗುಂಪಿನವರ ಕತ್ತಿ, ಕಟ್ಟಿಗೆ ಮೊದಲಾದ ಆಯುಧಗಳಿಗೆ ಬಲಿಯಾಗಿ ಬಿದ್ದರು.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)






## ೧೮

[ಉಪ್ಪು ನೀರು ನದಿಗಳ ಕುದುರಿನಲ್ಲಿ ಸಮುದ್ರಕೇತನ ಕಡೆಯ ಕಳ್ಳರನ್ನು ವಜ್ರಮುಷ್ಟಿ ಹತಮಾಡಿದನು. ತರುವಾಯ ಸಮುದ್ರಕೇತನು ಸೇರಿಕೊಂಡಿರುವ ಚಿಕ್ಕ ದ್ವೀಪದ ಕಡೆಗೆ ಶಿವದತ್ತ ಮೊದಲಾದವರು ಹೋದರು. ಅಲ್ಲಿ ಸಮುದ್ರಕೇತನಿಂದ ಬಂಧಿಸಲ್ಪಟ್ಟ ಅನೇಕಮಂದಿಗಳೊಂದಿಗೆ ತಾವು ಅವರನ್ನು ರಕ್ಷಿಸಲು ಬಂದವರೆಂಬುದನ್ನು ಹೇಳಿ, ಅವರೆಲ್ಲರನ್ನೂ ಬಿಡಿಸಿದರು. ಬಳಿಕ ಎಲ್ಲರೂ ಸೇರಿ ಥಕ್ಕನೆ ಸಮುದ್ರಕೇತನ ಗುಂಪಿನ ಮೇಲೆ ಬಿದ್ದರು.]

ವಜ್ರಮುಷ್ಟಿಯ ಮೃತ್ಯುದೃಷ್ಟಿ ಸಮುದ್ರಕೇತನ ಮೇಲೆಯೇ ಇದ್ದುದರಿಂದ, ಉಳಿದ ಕಳ್ಳರನ್ನೆಲ್ಲಾ ಬೇರೆಯವರ ಬಳಿಗೆ ದೂಡಿಯೂ, ತಳ್ಳಿಯೂ, ಸಮುದ್ರಕೇತನ ಇದಿರಿಗೆ ಹಾರಿ, ತನ್ನ ಕತ್ತಿಯಿಂದ ಒಂದೇಟುಕೊಟ್ಟನು. ಆ ಪೆಟ್ಟಿನ ಶಕ್ತಿ ಎಷ್ಟರ ಮಟ್ಟಿನದೆಂದರೆ ಅದರ ಆ ಒಂದೇ ಏಟಿಗೆ ಸಮುದ್ರ ಕೇತನ ಕತ್ತಿ ನಾಲ್ಕಾರು ತುಂಡುಗಳಾಗಿ ಮುರಿದು ಖಣಖಣನೆ ಕೆಳಗೆ ಬಿತ್ತು. ಸುತ್ತಲಿದ್ದವರು ಭೀಕರವಾಗಿ ಹೋರಾಟ ನಡೆಸುತ್ತಿರಲು, ವಜ್ರಮುಷ್ಟಿ ಸಮುದ್ರ ಕೇತರ ಯುದ್ಧದ ರೀತಿಯೇ ಬೇರೆಯಾಯಿತು.

ಸಮುದ್ರಕೇತನ ಕತ್ತಿಯನ್ನು ಮುರಿದಕೂಡಲೇ ವಜ್ರಮುಷ್ಟಿ ತನ್ನ ಕತ್ತಿಯನ್ನೂ ಬಿಸುಟು, "ಎಲೋ! ಮೃಗಕ್ಕಿಂತ ಕ್ರೂರನಾದ ಸಮುದ್ರಚೋರಾ! ನಿನ್ನನ್ನು ಮೃಗದ ಹಾಗೆ ಆಯುಧವೇನಿಲ್ಲದೆ ಕೊಲ್ಲುತ್ತೇನೆಂಬುದೇ ನನ್ನ ಪ್ರತಿಜ್ಞೆ! ಅದು ನೆರವೇರುವ ದಿನವೇ ಈ ದಿನ! ಇದೇ ನಿನ್ನ ಕಡೇ ದಿನ! ಕಡೇ ಕ್ಷಣ!" ಎನ್ನುತ್ತಾ ಸಮುದ್ರಕೇತನ ನಡು ಪಟ್ಟಿಯನ್ನು ಹಿಡಿದು ಎಳೆದು ಕಾಲ್ತಪ್ಪಿಸಿ ಚಾಪೆಯ ಸುರುಳಿಯಂತೆ ನೆಲಕ್ಕೆ ಕೆಡವಿದನು. ಮೃಗದಂತೆ ಮೇಲೆ ಬಿದ್ದು ನೆಲಕ್ಕೆ ಕೆಡವಲ್ಪಟ್ಟ ಪೆಟ್ಟಿನಿಂದ ಸಮುದ್ರಕೇತನು ಧಿಮ್ಮರ



ಗೊಂಡು "ಅಬ್ಬಾ" ಎಂದು ಕೂಗಿದನು. ಏಳಲು ಹವಣಿಸುವಾಗ ವಜ್ರಮುಷ್ಟಿ ಅವನ ಮೇಲೆಯೇ ಬಿದ್ದು, ಬಲವಾದ ಕೈಗಳಿಂದ ಕಂಠವನ್ನು ಬಿಗಿ ಹಿಡಿದನು. ವಜ್ರಮುಷ್ಟಿಯ ಹಲ್ಲುಗಳು ಕಟಕಟಿಸಿದುವು. "ಪಾಪಾತ್ಮಾ! ಇದೇ ನಿನಗೆ ತಕ್ಕ ಪ್ರಾಯಶ್ಚಿತ್ತ!" ಎಂದು ಹೇಳುತ್ತಾ, ವಜ್ರಮುಷ್ಟಿ ಸಮುದ್ರಕೇತನ ಕಂಠವನ್ನು ಹಿಚಿಕಿಕೊಂಡಿರಲು, ಅವನ ಕೈ ಕಾಲುಗಳ ಚಡಪಡಿಕೆ ನಿಂತುವು. ಆಗಿನ ಅವನ ಮುಖ ವಿಕಾರಗಳನ್ನು ನೋಡಲಾಗದಂತೆ ವಜ್ರಮುಷ್ಟಿ ಎದ್ದು ಕಾಲಿನಿಂದ ಅವನನ್ನು ಒದ್ದು ಜಾಡಿಸಿದನು. ಅಲ್ಲಿಗೆ ಮುಗಿಯಿತು ಸಮುದ್ರಕೇತನ ಕತೆ.

ಸ್ವಲ್ಪ ಹೊತ್ತಿಗೆಲ್ಲಾ ಶಿವದತ್ತ ಮಂದರದೇವ ಮತ್ತು ಇತರರ ಪೆಟ್ಟುಗಳಿಂದ ಸಮುದ್ರಚೋರರ ಕೋಳಿಯುವರನೇಕರು ಸತ್ತು, ಉಳಿದವರು ಆಯುಧಗಳನ್ನು ಕೆಳಗೆ ಹಾಕಿ, ಕೈ ಜೋಡಿಸಿ ಶರಣು ಶರಣೆಂದು ಕೂಗಿದರು. ಶಿವದತ್ತನ ಕಡೆಯವರು ಅವರನ್ನೆಲ್ಲಾ ಬಂಧಿಸಿ ಸಾಲಾಗಿ ನಿಲ್ಲಿಸಿದರು. ಅದುವರೆಗೂ ಆಕಸ್ಮಿಕವಾದ ಈ ಹೋರಾಟವನ್ನು ಹೇಗೆ ನಿಲ್ಲಿಸುವುದೆಂದು ತಿಳಿಯದೆ, ದೂರ ಸರಿದು ನಿಂತು ನೋಡುತ್ತಿದ್ದ ಹರಿಶಿಖರಾಜನ ಭಟರು, ಎಲ್ಲಾ ಮುಗಿದ ಮೇಲೆ ಮುಂದೆ ಬಂದು, "ಏನಿದೆಲ್ಲಾ? ಯಾರು ನೀವು? ಹೀಗೇಕೆ ಮಾಡಿದಿರಿ?" ಎಂದು ಕೋಪಮಿಶ್ರಿತ ಸ್ವರದಿಂದ ಶಿವದತ್ತನನ್ನು ನೋಡಿ ಕೇಳಿದರು.

"ಹಾಗೆ ಕೇಳಿರಿ. ಏನೂ ಕೇಳದೆ ದುಡುಕದಿರುವ ನೀವುಗಳು ವಿವೇಕಿಗಳೆಂದು ಗೊತ್ತಾಗುತ್ತದೆ. ನಾವು ಯಾರೆಂದರೆ" ಎಂದು ಶಿವದತ್ತನು ತಮ್ಮ ವಿಷಯವನ್ನು ಅವರೊಂದಿಗೆ ಹೇಳಿ, "ನೀವು ಯಾರೆಂಬುದನ್ನೂ ಸ್ವಲ್ಪ ಮಟ್ಟಿಗೆ ಅರಿತಿದ್ದೇವೆ. ನಾವು ನಿಮ್ಮ ಮಕರಮಂಡಲದ ರಾಜನಾದ ಹರಿಶಿಖನಿಗೆ ಮಿತ್ರರಾದವರೆಂದೇ ತಿಳಿಯಿರಿ. ನೀವು ಒಂದು ಮೊಸಳೆಯನ್ನು ದೇವತೆಯಾಗಿ ಪೂಜಿಸಿ, ಅದಕ್ಕೆ ಮನುಷ್ಯರ ಬಲಿಯನ್ನು ಕೊಡುವ ಸಂಪ್ರದಾಯವಿಟ್ಟುಕೊಂಡಿದ್ದೀರಂತೆ. ಆ ಪಿಶಾಚಿ ಮೊಸಳೆಯನ್ನು ಹತಮಾಡುವ ಪಿಶಾಚಶಕ್ತಿಯ ವ್ಯಕ್ತಿ ನಮ್ಮಲ್ಲಿದ್ದಾನೆ. ಇವನೇ! ಇವನಿಗೆ ಆ ಮೊಸಳೆಯ ಬಲಿಯೇ ಬೇಕಂತೆ" ಎಂದು ವಜ್ರಮುಷ್ಟಿಯನ್ನು ತೋರಿಸಿದನು,

ಆ ಭಟರು ತಲೆದೂಗಿ, "ಪ್ರಜೆಗಳ ಇಷ್ಟದಂತೆ ಮಹಾರಾಜರು ಮಾಡಬೇಕಾಗಿ ಬಂದಿದೆ. ಯಾವುದಕ್ಕೂ ನಮ್ಮ ಮಹಾರಾಜರೊಡನೆ ನೀವು ಮಾತಾಡಬೇಕು" ಎಂದು ಭಟರು ಶಿವದತ್ತ ಮೊದಲಾದವರನ್ನು ಮಕರಮಂಡಲಕ್ಕೆ ಕರೆದುಕೊಂಡು ಹೋದರು.

ಭಟರಿಂದ ಸಂಗತಿ ತಿಳಿದು ಹರಿಶಿಖರಾಜನು, ಶಿವದತ್ತ, ಮಂದರದೇವಾದಿಗಳನ್ನು ಗೌರವದಿಂದ ಸ್ವಾಗತ ಮಾಡಿ, "ನೀವು ನಮ್ಮ ಭಟರೊಂದಿಗೆ ಹೇಳಿದ ಹಾಗೆ ಮಕರದೇವತೆಯನ್ನು ಕೊಲ್ಲುವವನು ಯಾರು? ಎಲ್ಲಿದ್ದಾನೆ? ಅದು ನಿಜಕ್ಕೂ ದೇವತೆಯೋ

ಬರೆಮಾರಿ ಮೊಸಳೆಯೋ ಎಂಬುದನ್ನು ತಿಳಿಯ ಬೇಕೆಂದು ನನಗೂ ಕುತೂಹಲವಿದೆ" ಎಂದು ತನ್ನ ಆತುರವನ್ನು ಪ್ರಕಟಿಸಿದನು.

ಆಗ ವಜ್ರಮುಷ್ಟಿ ಮುಂದೆ ಬಂದು, "ಮಹಾ ರಾಜರೇ, ನಾನು ಚಿಕ್ಕಂದಿನಿಂದಲೂ ಶಮನದ್ವೀಪದಲ್ಲಿ ಮೊಸಳೆಗಳ ಬೇಟೆಯಾಡಿಕೊಂಡಿದ್ದವನು. ನೀವು ದಯ ಮಾಡಿ ನನಗೆ ಆ ಮೊಸಳೆ ಇರುವ ಸ್ಥಳವನ್ನು ತೋರಿಸಿದರೆ ಸಾಕು. ನಾನು ಕಣ್ಣು ಮುಚ್ಚಿ ತೆರೆಯುವುದರೊಳಗೆ ಅದನ್ನು ಕೊಂದುಬಿಡುತ್ತೇನೆ" ಎಂದನು ವಿನಯದಿಂದ.



ವಜ್ರಮುಷ್ಟಿಯ ಮಾತುಗಳನ್ನು ಕೇಳಿ ಹರಿಶಿಖಿ ರಾಜನು ಸಣ್ಣಗೆ ನಕ್ಕು, "ಆ ಮೊಸಳೆಯನ್ನು ಮೂರ್ಖರಾದ ಅನೇಕಮಂದಿ ಪ್ರಜೆಗಳು ಈ ಮಂಡಲಾಧಿದೇವತೆ ಎಂದು ಪೂಜಿಸುತ್ತಿದ್ದಾರೆ. ಅಂತಲೇ ಅದನ್ನು ನೋಡಿ ಎಲ್ಲರೂ ಹೆದರುವರು. ನಿನ್ನಂತಹ ಕುಳ್ಳ ಮನುಷ್ಯನೊಬ್ಬನು ಬಂದು ಅದನ್ನು ಬಲಿ ತೆಗೆದುಕೊಳ್ಳುವನೆಂದೂ, ಅವನಿಗಾಗಿ ಅದನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕೆಂದೂ. ಅದುವರೆಗೆ ಮಕರಮಂಡಲಾಧಿದೇವತೆ ಅದನ್ನು ಆವಹಿಸಿಕೊಂಡಿರುವಳೆಂದೂ ಒಬ್ಬ ದೈವಜ್ಞನು ಹೇಳಿದಂತೆಯೂ ಪ್ರವಾದವಿದೆ. ಅದಕ್ಕೆ ಸರಿ ಯಾಗಿಯೇ ನೀನು ಕಾಣುವೆ. ನಿನ್ನ ಶಕ್ತಿ ಸಾಮರ್ಥ್ಯ ಗಳನ್ನು ನೋಡಬೇಕೆಂದು ನನಗೂ ಕುತೂಹಲವಿದೆ" ಎಂದನು.

ಶಿವದತ್ತನು ರಾಜನ ಮಾತನ್ನು ಅನುಮೋದಿಸಿ ಕೊಂಡಂತೆ ತಲೆದೂಗಿ, "ಮಹಾರಾಜಾ! ಈ ಮೊಸಳೆಯ ಅಪಾಯದಿಂದ ನಿಮ್ಮೆಲ್ಲರನ್ನೂ ನಾವು ಕಾಪಾಡುತ್ತೇವೆ. ಇದರಿಂದ ನಿಮ್ಮ ಪ್ರಜೆಗಳಿಗೆ ಕ್ಷೇಮ ವಾಗಿ ನಿಮಗಿರುವ ಕೆಟ್ಟ ಹೆಸರೂ ಹೋಗುತ್ತದೆ. ಇದಕ್ಕೆ ಪ್ರತಿಯಾಗಿ ನಿಮ್ಮಿಂದ ನಾವೊಂದು ಸಹಾಯ ವನ್ನು ಕೇಳಬಹುದೆ? ಅದನ್ನು ಮೊದಲೇ ತಿಳಿದು ಬಿಟ್ಟರೆ, ನಮಗೆ ಇಮ್ಮಡಿ ಉತ್ಸಾಹ ಬಂದೀತು. ಅಪ್ಪಣೆಯಾದರೆ ಹೇಳುವೆನು" ಎಂದನು.

ಹರಿಶಿಖಿನು ನಗುತ್ತ, "ಸಹಾಯವೇ? ಅಗತ್ಯ ವಾಗಿ ಕೇಳಿರಿ. ಎಂತಹ ಸಹಾಯವಾದರೂ ಮಾಡು ತ್ತೇನೆ. ಮಕರದೇವತೆ ಎಂದು ಕರೆಯಲ್ಪಡುವ ಈ ಮಕರ ಪಿಶಾಚಿಯಿಂದ ಬಿಡುಗಡೆಯಾದರೆ. ಎಷ್ಟೋ ಧನವು ಉಳಿದು ಹೋಗುತ್ತದೆ. ನನ್ನ ಪ್ರಜೆಗಳ ಮೂಢವಿಶ್ವಾಸದಿಂದ ಅದರ ಬಲಿಗೆ ಹಿಡಿಸಿ ತರುವ ಮನುಷ್ಯರಿಗಾಗಿ ನಾನು ಮಾಡುವ ಖರ್ಚು, ಬೇಗದಲ್ಲೇ ನನ್ನ ಖಜಾನೆ ಬರಿದಾಗುವಂಥಾದ್ದೇ" ಎಂದನು. ಆಗ ಶಿವದತ್ತನು ಹರಿಶಿಖಿನಿಗೆ, ಕುಂಡಲಿನೀ, ಮರಾಳದ್ವೀಪಗಳ ವೃತ್ತಾಂತವನ್ನೆಲ್ಲಾ ಹೇಳಿ, "ನಿಮಗೆ ದೊಡ್ಡ ನಾವಿಕಾದಳವಿದೆಯೆಂದು ಕೇಳಿದ್ದೇನೆ. ನಮ್ಮ ದೇಶಗಳನ್ನು ಕ್ರೂರರ ಪರಿಪಾಲನೆಯಿಂದ ರಕ್ಷಿಸಲು ನಿಮ್ಮಿಂದ ನಮಗೆ ಸಹಾಯವಾಗಬೇಕು" ಎಂದನು. ಹರಿಶಿಖಿನು ಒಪ್ಪಿದನು.



ಆ ರಾತ್ರಿ ಶಿವದತ್ತನಿಗೂ ಅವನ ಅನುಚರರಿಗೂ ಹರಿಶಿಖಿ ರಾಜನು ಭಾರಿ ಔತಣ ಮಾಡಿಸಿದನು. ಮಕರಮಂಡಲದೊಳಗಿನ ಎಲ್ಲಾ ಪ್ರಾಂತದವರಿಗೂ ಮ ಕ ರ ದೇ ವ ತೆ ಯ ಅವತಾರ ಸಮಾಪ್ತಿಯ ಸಮಾರಂಭ ನೋಡಲು ಬರುವಂತೆ ಆಮಂತ್ರಣ ಕಳುಹಿಸಿದನು. ಎಷ್ಟೋ ಕಾಲದಿಂದ ಇದಿರು ನೋಡುತ್ತಿರುವ ಕುಬ್ಜಾವತಾರದವನು ಬಂದಿದ್ದಾನೆಂದೂ, ಅವನು ಬಲಿ ತೆಗೆದುಕೊಳ್ಳುವ ಮಕರಜಲ ದೇವತೆಯನ್ನು ನೋಡಲು ಬರಬೇಕೆಂದೂ ಉಳಿದ ಕಡೆಗಳಿಗೆಲ್ಲ ಡಂಗುರದ ಮೂಲಕ ತಿಳಿಸಲಾಯಿತು.

ಮರುದಿನ ನಡುಮಧ್ಯಾಹ್ನದ ವೇಳೆಯಲ್ಲಿ ಮಕರ ಮಂಡಲ ವಾಸಿಗಳೆಲ್ಲಾ ಮೊಸಳೆಯ ವಾಸಸ್ಥಳದ ಸುತ್ತಲೂ ಗುಂಪು ಗೂಡಿದರು. ಅಲ್ಲಿರುವ ಒಂದು ಬೆಟ್ಟದ ಶಿಖರದಿಂದ ಕೆಳಗೆ ನೋಡಿದರೆ, ತಳದಲ್ಲಿ ಹರಿಯುತ್ತಿರುವ ನದಿಯೊಂದು ಕಾಣುತ್ತದೆ. ಆ ನದಿಯ ಬದಿಯ ಒಂದು ಗವಿಯೊಳಗೆ ಆ ಮೊಸಳೆ ವಾಸವಾಗಿರುತ್ತದೆ. ಆ ಗುಹೆಯ ವಠಾರದಲ್ಲಿ ಆ ನದಿ ಒಂದು ಸರೋವರದಂತೆ ಅಗಲವಾಗಿ ಕಾಣುತ್ತದೆ.

ವಜ್ರಮುಷ್ಟಿ ಒಂದಡಿ ಉದ್ದವಿರುವ ಎರಡು ಕತ್ತಿಗಳನ್ನು ತನ್ನ ಎರಡು ಮುಷ್ಟಿಗಳೊಳಗೆ ಅವುಗಳ ಹಿಡಿಕೆಯೊಂದಿಗೆ ಹಗ್ಗದಿಂದ ಬಲವಾಗಿ ಬಿಗಿಸಿಕೊಂಡನು. ಹಾಗೆ ತನ್ನ ಮುಷ್ಟಿಗಳನ್ನು ಗಟ್ಟಿ ಮಾಡಿಕೊಂಡು, ಎಲ್ಲರೂ ನೋಡುತ್ತಿರುವಂತೆ, ಬೆಟ್ಟದ ಅ ರ್ಧ ದ ಷ್ಟು ಕೆಳಗಿಳಿದು, ನದಿಯ ಸರೋವರದ ನಡುವಿಗೆ ಧುಮುಕಿದನು. ಮುಳುಗಿ ಎದ್ದು ಮೊಸಳೆಯ ಗುಹೆಯ ಕಡೆಗೆ ಈಜಿ ಹೋಗ ತೊಡಗಿದನು.

ವಜ್ರಮುಷ್ಟಿ ಗುಹೆಯನ್ನು ಸಮೀಪಿಸುವುದರೊಳಗೆ, ಕಣ್ಣುಗಳಿಂದ ಬೆಂಕಿಯ ಕಿಡಿಗಳನ್ನುಗುಳುತ್ತ, ಮಹಾ ಮೊಸಳೆ ಅವನ ಕಡೆಗೇ ಹಾಯ್ದು ಬಂತು. ವಜ್ರಮುಷ್ಟಿ ಇದ್ದಲ್ಲೇ ಸ್ಥಿರವಾಗಿ ನಿಂತು. ಅದರ ತೆರೆದ ಬಾಯಿಗೆ ಎರಡು ಕಡೆಗಳಲ್ಲಿರುವ ಮುಷ್ಟಿಗಳ ಕತ್ತಿಯನ್ನು ಹಿಡಿದುಕೊಂಡು ಕೈಗಳನ್ನು ಅಗಲಿಸಿದನು. ಆ ಕತ್ತಿಗಳು ಮೊಸಳೆಯ ದವಡೆಗಳ ಎಡದು ಬದಿಗಳನ್ನೂ ಸೀಳಿಕೊಂಡೇ ಹೋದುವು. ಅದು ನೋವಿನಿಂದ ವಜ್ರಮುಷ್ಟಿಯನ್ನು ಎಳೆದುಕೊಂಡೇ ಆಚೆಗೂ ಈಚೆಗೂ ಹೊರಳಾಡ ತೊಡಗಿತು. ಬಾಲವನ್ನು ಎತ್ತಿಬೀಸಿ ಹೊಡೆಯಲು ಪ್ರಯತ್ನಿಸ ತೊಡಗಿತ್ತು.

ವ ಜ್ರ ಮು ಷ್ಟಿ ಫಕ್ಕನೆ ಒಂದು ಕೈಯಿಂದ ಒರೆಯಲ್ಲಿದ್ದ ದೊಡ್ಡ ಕತ್ತಿಯನ್ನು ಸೆಳೆದು ದೊಸಳೆಯನ್ನು ತಿವಿಯುತ್ತಾ, ಅದರ ಬಾಲದ ಪೆಟ್ಟನ್ನು ತ ಪ್ಪಿ ಸಿ ಕೊ ಳ್ಳು ತ್ತಾ, ಎರಡು ಗಂಟೆಯ ವರೆಗೆ ಅದರೊಂದಿಗೆ ಹೋರಾಡಿ, ಪೂರ್ಣಶಕ್ತಿ ಕಳೆದುಕೊಂಡು ಕೊನೆಯುಸಿರಾಗಿದ್ದ ಆ ಮೊಸಳೆಯನ್ನು ತೀರಕ್ಕೆ ಎಳೆದು ಹಾಕಿದನು.

ಬೆಟ್ಟದ ಶಿಖರದಲ್ಲಿ ಈ ಭಯಂಕರ ಹೋರಾಟವನ್ನು ಹರಿಶಿಖಿರಾಜನೂ, ಪ್ರಜೆಗಳೂ ನೋಡಿದರು.



ಮೊಸಳೆಯ ಮರಣವನ್ನು ನೋಡಿ ಜಯಜಯವೆಂದು ಘೋಷಣ ಮೆಚ್ಚಿಸಿದರು. ಆಮೇಲೆ ಒಂದು ವಾರದ ವರೆಗೆ ಮಕರಮಂಡಲದಲ್ಲಿ ಆನಂದೋತ್ಸವಗಳೇ!

ಹರಿಶಿಖನು ತಾನು ಮಾಡಿದ ವಾಗ್ದಾನದ ಪ್ರಕಾರ ಶಿವದತ್ತನಿಗೆ ದೊಡ್ಡ ನಾವಿಕಾ ಬಲವನ್ನೂ, ಇಪ್ಪತ್ತು ಸಾವಿರಮಂದಿ ಸೈನಿಕರನ್ನೂ ಒಪ್ಪಿಸಿಕೊಟ್ಟನು. ಒಂದು ಶುಭಮುಹೂರ್ತದಲ್ಲಿ ಶಿ ವ ದ ತ್ತ ನೂ, ಮಂದರ ದೇವನೂ, ಮರಾಳ ಮತ್ತು ಕುಂಡಲಿನೀದ್ವೀಪ ರಾಜ್ಯಗಳನ್ನು ವ ಶ ಪ ಡಿ ಸಿ ಕೊ ಳ್ಳ ಲು ಪ್ರಯಾಣ ಹೊರಟರು. ಅವರೊಂದಿಗೆ ದೇವಮಾಯಿಯೂ, ಸ್ವಯಂಪ್ರಭೆಯೂ ಇದ್ದರು. ಸ್ವಯಂಪ್ರಭೆ ಶಮನ ದ್ವೀಪ ರಾಜಕುಮಾರಿ ಎಂಬ ಸಂಗತಿಯನ್ನು ಈಗ ದೇವಮಾಯಿ ಶಿವದತ್ತನೊಂದಿಗೆ ಹೇಳಿದಳು.

ಶಿವದತ್ತನು ಈ ಶುಭಸಂಗತಿಯನ್ನು ಕುರಿತು ಶಮನದ್ವೀಪದ ರಾಜನಿಗೆ ರಾಯಭಾರ ಕಳುಹಿಸಿದನು. ಸ್ವಯಂಪ್ರಭೆಗೆ ಮಂದರದೇವನೊಂದಿಗೆ ವಿವಾಹ ಮಾಡಿಸಿದರೆ ಆ ಮೂರು ರಾ ಜ್ಯ ಗ ಳಿ ಗೂ ಶ್ರೇಯಸ್ಸಾಗುವುದೆಂದು ಶಿವದತ್ತನ ಉದ್ದೇಶ.

ಕಳ್ಳರಿಂದ ಅಪಹರಿಸಲ್ಪಟ್ಟ ತನ್ನ ಕುಮಾರಿಯನ್ನು ಇನ್ನು ಮೇಲೆ ನೋಡುವ ಆಶೆಯಿಲ್ಲವೆಂದು, ಶೋಕದಲ್ಲಿ ಮುಳುಗಿದ್ದ ಶಮನರಾಜನು, ಆ ಶುಭ ವಾರ್ತೆಯನ್ನು ಕೇಳಿ ಜೀವಪಡೆದಂತಾದನು. ತನ್ನ ಕುಮಾರಿ ಕ್ಷೇಮವಾಗಿರುವಳೆಂದೂ, ಅ ವ ಳ ನ್ನು ಮರಾಳದ್ವೀಪದ ರಾಜನಾದ ಮಂದರದೇವನು ವಿವಾಹ ಮಾಡಿಕೊಳ್ಳಲು ಆ ಶಿ ಸು ವ ನೆಂ ದೂ ರಾಯಭಾರಿಯ ಮೂಲಕ ತಿಳಿದು ಶಮನರಾಜನು ಇನ್ನಿಷ್ಟು ಸಂತೋಷಪಟ್ಟನು. ಅವನು ಕೂಡಾ ಸ್ವಲ್ಪ ನಾವಿಕ ಬಲದೊಂದಿಗೆ ಸೈನಿಕ ಬಲವನ್ನೂ ಕೂಡಿಸಿ ಆಗಲಿರುವ ಅಳಿಯನ ಸಹಾಯಕ್ಕಾಗಿ ಹೊರಟನು.

ಗೂಢಚಾರರಿಂದ ತನ್ನ ಮೇಲೆ ಬರಲಿರುವ ಈ ದಾಳಿಯನ್ನು ಕುರಿತು ನರವಾಹನನು ತಿಳಿದು ಭಯ ದಿಂದ ದಿಕ್ಕುತೋರದೆ ನಡುಗಿದನು.ಮರಾಳ ಮತ್ತು ಕುಂಡಲಿನೀ ದ್ವೀಪಗಳನ್ನು ರಕ್ಷಿಸಿಕೊಳ್ಳುವುದೆಂದರೆ ತಲೆಮೀರಿದ ಕಾರ್ಯವೆಂದು ಅವನಿಗೆ ತೋರಿತು. ಅಂತಲೇ ಅವನು ಗುಟ್ಟಾಗಿ ಮರಾಳ ದ್ವೀಪವನ್ನು ಬಿಟ್ಟು, ಇರುವ ಬಲವನ್ನೆಲ್ಲಾ ಕುಂಡಲಿನೀ ದ್ವೀಪ ದಲ್ಲೇ ಕೇಂದ್ರೀಕರಿಸಿಕೊಂಡನು.

ಯಾವುದೊಂದು ಪ್ರತಿಭಟನೆಯೂ ಇಲ್ಲದೆ, ಶಿವದತ್ತನೂ, ಮಂದರದೇವನೂ ಮೊದಲು ಮರಾಳ ದ್ವೀಪವನ್ನು ಆಕ್ರಮಿಸಿಕೊಂಡರು. ಅಲ್ಲಿಯ ಪ್ರಜೆ ಗಳಿಗೆ ತಮ್ಮ ರಾಜನನ್ನು ನೋಡಿ ಉಂಟಾದ ಸಂತೋಷಕ್ಕೆ ಮೇರೆ ಇರಲಿಲ್ಲ. ಆದರೆ ಮಂದರದೇವ ಶಿವದತ್ತರು ಅಲ್ಲಿ ಹೊತ್ತು ಕಳೆಯದೆ ಅಲ್ಲಿಂದ ಸೀದಾ ಕುಂಡಲಿನೀ ದ್ವೀಪಕ್ಕೆ ಹೋದರು. ತೀರದಲ್ಲೆಲ್ಲಿಯೂ ನರವಾಹನನ ಸೈನಿಕರಾರೂ ಕಾಣಲೇ ಇಲ್ಲ. ಶಿವದತ್ತನಿಗೆ ಇದು ಬಹಳ ಆಶ್ಚರ್ಯವನ್ನುಂಟು



ಮಾಡಿತು. ಅವನು ಒಳಪ್ರಾಂತಕ್ಕೆ ಗೂಢಚಾರರನ್ನು ಕಳುಹಿಸಿದನು. ಅವರು ಹೋಗಿ ಸ್ವಲ್ಪ ಹೊತ್ತಿಗೆಲ್ಲಾ ಬಂದು, "ಅಯ್ಯಾ, ನಾವು ದಾಳಿ ಬರುವ ವಿಷಯವನ್ನು ತಿಳಿದು, ಈ ಮೊದಲು ನರವಾಹನನಿಂದ ಚಿತ್ರ ಹಿಂಸೆಗೆ ಗುರಿಯಾದ ಬೇಡರು ನೂತನೋತ್ಸಾಹದಿಂದ ನರವಾಹನನ ಮೇಲೆ ತಿರುಗಿ ಬಿದ್ದರು. ಆ ಬೇಡರ ಬಂಡಾಯದ ಗುಂಪು ಈಗ ನಗರವನ್ನು ಮುತ್ತಿಕೊಂಡಿದೆ" ಎಂದು ಸಮಾಚಾರ ಹೇಳಿದರು.

ಈ ವಾರ್ತೆ ಮಂದರದೇವನನ್ನು ಬಹಳ ನಿರುತ್ಸಾಹಪಡಿಸಿತು. "ಅರರೇ! ಅವನ ಕೆಲಸವನ್ನು ಈ ಬೇಡರೇ ಮುಗಿಸುವ ಹಾಗಿದೆಯಲ್ಲಾ! ಎಂದಾದರೂ, ನಾನೇ ನನ್ನ ಸ್ವಹಸ್ತದಿಂದ ಆ ಕ್ರೂರ ನರವಾಹನನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ್ದೆ. ಈಗ ನನ್ನ ಪ್ರತಿಜ್ಞೆಯ ಗತಿ ಏನು!" ಎಂದನು ಮಂದರದೇವ.

"ಹಾಗೆ ತಪ್ಪಿದರೂ ಒಳ್ಳೇದಾಯಿತನ್ನಿ! ಆ ಪಾಪಿಯನ್ನು ಕೊಂದು ನಿಮ್ಮ ಖಡ್ಗವನ್ನೇಕೆ ಹೊಲೆ ಮಾಡಿಕೊಳ್ಳಬೇಕು" ಎಂದು ಶಿವದತ್ತನು ನಗುತ್ತ ಹೇಳಿ, ವಜ್ರಮುಷ್ಟಿಯನ್ನು ಕರೆದು ಅವನೊಂದಿಗೆ ಐವತ್ತುಮಂದಿ ಅಶ್ವೀಕರನ್ನು ಕೊಟ್ಟು ಮುಂದಾಗಿ ಕಳುಹಿಸಿದನು. ಒಂದು ವೇಳೆ ನರವಾಹನನು ಇನ್ನೂ ಬದುಕಿದ್ದರೆ, ಅವನನ್ನು ಕೊಲ್ಲಬೇಡವೆಂದು ಬೇಡರಿಗೆ ತಿಳಿಸುವಂತೆ ವಜ್ರಮುಷ್ಟಿಗೆ ಎಚ್ಚರಿಕೆಕೊಟ್ಟನು.

ವಜ್ರಮುಷ್ಟಿ ಅಶ್ವೀಕರೊಂದಿಗೆ ಕುಂಡಲಿನೀ ನಗರವನ್ನು ಸೇರುವಷ್ಟರಲ್ಲಿ, ಮಿಡಿತೆಗಳ ದಂಡಿನಂತೆ ಬೇಡರು ನಗರದ ಮೇಲೆ ಬಿದ್ದಿದ್ದರು. ಅವರ ಕತ್ತಿ, ಈಟಿ, ಬಾಣ, ದೊಣ್ಣೆ, ಬಲೆಗಳು ನರವಾಹನನ ದುಷ್ಟ ಸೈನಿಕ ಗಢಣವನ್ನು ಕೊಂದು ಕೊಂದು ರಾಶಿ ಹಾಕುತ್ತಿದ್ದುವು. ವಜ್ರಮುಷ್ಟಿ ಶಿವದತ್ತನಿಂದ ತಾನು ತಂದ ಆಜ್ಞೆಯನ್ನು ಬೇಡರ ನಾಯಕನಿಗೆ ತಿಳಿಯಪಡಿಸಿ, ಕೋಟೆಯನ್ನು ಸಮೀಪಿಸಿದನು. ಆಗ ಬುರುಜಿನ ಮೇಲ್ಭಾಗದಲ್ಲಿ ಕೈ ಕಾಲುಗಳನ್ನು ಬಂಧಿಸಲ್ಪಟ್ಟ ನರವಾಹನನು ಬೇಡಬಂಟರ ನಡುವೆ ಕಾಣಿಸಿದನು.

"ಅವನನ್ನು ಕೊಲ್ಲಬೇಡ್ರೋ! ಶಿವದತ್ತರ ಅಜ್ಞೆ!" ಎಂದು ಗಟ್ಟಿಯಾಗಿ ಕೂಗುತ್ತಾ ವಜ್ರಮುಷ್ಟಿ ತನ್ನ ಕುದುರೆಯನ್ನು ಸಮೀಪಕ್ಕೆ ಓಡಿಸಿದನು. ಅಷ್ಟರೊಳಗೆ ಕ್ರೂರ ನರವಾಹನನು ಬುರುಜಿನ ಮೇಲಿನಿಂದ ಕೆಳಗಿನ ಅಗಳ್ತೆಯೊಳಗೆ ದೂಡಲ್ಪಟ್ಟನು. ಅದೇ ಸಮಯದಲ್ಲಿ ಆ ಪ್ರಾಂತದಲ್ಲಿ ಗುಂಪು ಗೂಡಿದ ಬೇಡರು ಹರ್ಷಧ್ವಾನಗಳನ್ನು ಮಾಡಿದರು. ವಜ್ರಮುಷ್ಟಿ ಅಗಳ್ತೆಯಬಳಿಗೆ ಹೋಗಿ ನೋಡಲು ನರವಾಹನನು ಸತ್ತು ಬಿದ್ದಿದ್ದನು.

ಅನಂತರ ಬಹಳ ಹೊತ್ತಿನ ಮೇಲೆ ಶಿವದತ್ತ, ಮಂದರದೇವ, ಶಮನರಾಜ ಕೂಡಾ ಸೇನೆಯೊಂದಿಗೆ ಅಲ್ಲಿಗೆ ಬಂದರು. ಅವರಿಗೆ ಬೇಡರ ನಾಯಕನು ಘನರೀತಿಯಲ್ಲಿ ಸ್ವಾಗತ ಮಾಡಿದನು. ಆಗಿಂದಾಗಲೇ

ಮಂದರದೇವನು ಮರಾಳದ್ವೀಪಕ್ಕೂ ಕುಂಡಲಿನೀ ದ್ವೀಪಕ್ಕೂ ಮಹಾರಾಜನೆಂದು ಪ್ರಕಟಿಸಲ್ಪಟ್ಟಿತು. ಬೇಡರಿಗೆಲ್ಲಾ ನರವಾಹನನು ಆಕ್ರಮಿಸಿಕೊಂಡ ಅದರ ಭಾಗಗಳನ್ನು ಅವರಿಗೇ ತಿರುಗಿಕೊಟ್ಟು ಸ್ವತಂತ್ರರನ್ನಾಗಿಯೂ ಮಾಡಲಾಯಿತು.

ಒಂದುವಾರ ದಿನಗಳು ಕಳೆದ ಮೇಲೆ ಶುಭದಿನದಲ್ಲಿ ಮಂದರದೇವನಿಗೆ ಸ್ವಯಂಪ್ರಭೆಯೊಂದಿಗೆ ವಿವಾಹವು ಬಹು ವಿಜೃಂಭಣೆಯಿಂದ ನಡೆಯಿತು. ಶಿವದತ್ತನು ಹರಿಶಿಖಿನು ಕಳುಹಿಸಿದ ಸೈನಿಕರಿಗೆಲ್ಲಾ ದೊಡ್ಡ ದೊಡ್ಡ ಬಹುಮಾನಗಳನ್ನು ಕೊಟ್ಟು ಅವರನ್ನು ಮಕರಮಂಡಲಕ್ಕೆ ಕಳುಹಿಸಿದನು.

ತರುವಾಯ ಒಂದು ದಿನ ಶಿವದತ್ತನ ಅಪೇಕ್ಷೆಯಂತೆ ಮಂದರದೇವನು ಮಹಾಸಭೆಯ ಏರ್ಪಾಡು ಮಾಡಿದನು. ಅದಕ್ಕೆ ಮರಾಳ, ಕುಂಡಲಿನೀ ದ್ವೀಪಗಳ ಹಿರಿಯರೆಲ್ಲಾ ಬಂದರು. ಶಿವದತ್ತನು, ತಾನು ಸನ್ಯಾಸವನ್ನು ಸ್ವೀಕರಿಸಿ, ಅರಣ್ಯಕ್ಕೆ ಹೋಗುವೆನೆಂದೂ, ಶೇಷ ಜೀವಿತವನ್ನು ದೈವಧ್ಯಾನದಲ್ಲಿ ಕಳೆಯುವೆನೆಂದೂ ಆ ಸಭೆಯಲ್ಲಿ ಪ್ರಕಟಿಸಿದನು.

ಇದನ್ನು ಕೇಳಿ ಮಂದರದೇವನಿಗೂ ಸಭಿಕರಿಗೂ ಕಳವಳವಾಯಿತು. ಅವರೆಲ್ಲಾ ಶಿವದತ್ತನನ್ನು ಮಂತ್ರಿಯಾಗಿಯೋ ರಾಜಗುರುವಾಗಿಯೋ ಇದ್ದು ತಮ್ಮನ್ನು ನಡೆಸಬೇಕೆಂದು ಕೇಳಿಕೊಂಡರು. ಶಿವದತ್ತನು ಅದಾವುದನ್ನೂ ಅಂಗೀಕರಿಸಲಿಲ್ಲ. ಅವನು ಮಂದರದೇವ ಹಾಗೂ ಸಭಿಕರನ್ನು ನೋಡಿ, ಹೀಗೆ ಹೇಳಿದನು:

"ಪಾಲಕರೂ, ಪಾಲಿತರೂ ಯಾವ ರೀತಿಯ ಧರ್ಮಗಳನ್ನು ಅನುಸರಿಸಿದರೆ ದೇಶಕ್ಕೆ ಕ್ಷೇಮವಾಗುವುದೆಂಬುದನ್ನು ಈವರೆಗೆ ನಡೆದ ಘಟನೆಗಳಿಂದ, ಮರಾಳದವರಿಗೂ, ಕುಂಡಲಿನಿಯವರಿಗೂ ಚೆನ್ನಾಗಿ ಗೊತ್ತಾಗಿರಬೇಕೆಂದು ನಾನು ನಂಬುತ್ತೇನೆ. ಚಿತ್ರಸೇನ, ಸಮರಸೇನರ ಪರಿಪಾಲನೆಯಲ್ಲಿ ಏನಾಯಿತು, ನರವಾಹನನ ಪ್ರವೇಶ ಹೇಗಾಯಿತು ಎಂಬುದನ್ನೆಲ್ಲಾ ನೀವೆಲ್ಲರೂ ಮರೆಯದಿದ್ದರೆ ಆಯಿತು. ಆದುದರಿಂದ ಯಾವುದು ಧರ್ಮ, ಯಾವುದು ಅಧರ್ಮ ಎಂಬುದು ನಿಮಗೆಲ್ಲಾ ಅಂಗೈ ಕನ್ನಡಿಯಂತೆ ನಿಮ್ಮ ಮನಸ್ಸಿನ ಮುಂದಿದೆ. ಅದಕ್ಕೆ ಅನುಗುಣವಾಗಿ ನೀವೆಲ್ಲಾ ಪ್ರವರ್ತಿಸಿಕೊಂಡು ಸುಖವಾಗಿರಬೇಕು."

ಶಿವದತ್ತನ ಮಾತುಗಳನ್ನು ಕೇಳಿ ಎಲ್ಲರೂ ಹರ್ಷಧ್ವನಿ ಮಾಡಿದರು. ಶಿವದತ್ತನು ಎಲ್ಲರಿಗೂ ನಮಸ್ಕಾರ ಮಾಡಿ, ಸಭೆಯಿಂದ ಹೊರಟನು. ರಾಜನೂ ಪ್ರಜೆಗಳೂ ಅವನನ್ನು ಅನುಸರಿಸಿ ಪಟ್ಟಣಕ್ಕೆ ನಾಲ್ಕೈದು ಕ್ರೋಶ ದೂರದಲ್ಲಿರುವ ಅರಣ್ಯದವರೆಗೂ ಹೋದರು. ಶಿವದತ್ತನು ಅಲ್ಲಿಂದ ಎಲ್ಲರನ್ನೂ ಹಿಂದಿರುಗಲು ಹೇಳಿ ನಮಸ್ಕಾರಮಾಡಿ ಅರಣ್ಯದೊಳಗೆ ಹೊರಟುಹೋದನು. (ಮುಗಿಯಿತು)

